# ಮಾನಸಿ

ಜೂನ್ 2005 ತಿಂಗಳ ಪತ್ರಿಕೆ


- ಶಕುಂತಲ ಕನ್ವರ್
- ತಿರುಗಿ ( ಮತ್ತೆ ಬೆಳಗಾಗುವುದು)
- 'ಬದುಕು' - ಒಂದು ಸಾಂಸ್ಕೃತಿಕ ಕಥನ
- ಮಹಿಳೆ - ನೈತಿಕತೆ ಮತ್ತು ಸಮಾನತೆ
- ಹಂಪಿ ಮಹಿಳಾ ವಿಶ್ವವಿದ್ಯಾನಿಲಯದ ಒಂದು ಸಂಭ್ರಮದ ದಿನ
- ಮಹಿಳಾ ಅಧ್ಯಯನಕ್ಕೊಂದು ಶೈಕ್ಷಣಿಕ ಕೈಪಿಡಿ
- " ಬಹು ಪತ್ನಿತ್ವ ಸರಿಯೇ ? "
- ದಾಳದ ಆಟ
- ವರ್ತುಲ

**ಮಾನಸ** ತಿಂಗಳ ಪತ್ರಿಕೆ ಜೂನ್ 2005
ಸಂಪುಟ : 20 ಸಂಚಿಕೆ : 6



**ವಿಳಾಸ :**
**"ಮಾನಸ"** ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ - ಪೋಸ್ಟ್
ಬೆಂಗಳೂರು - 560 067

**ಸೂಚನೆ :**

| | |
|---|---|
| ಬಿಡಿಪ್ರತಿ | 10-00 ರೂ. |
| ವಾರ್ಷಿಕ ಚಂದಾ | 100-00 ರೂ. |
| ಸಂಸ್ಥೆಗಳಿಗೆ | 150-00 ರೂ. |

## ಈ ಸಂಚಿಕೆಯಲ್ಲಿ.....


- ಶಕುಂತಲ ಕನ್ವರ್ — ಶ್ಯಾಮಲ ಕೋಲಾರ.
- ತಿರುಗಿ ( ಮತ್ತೆ ಬೆಳಗಾಗುವುದು) — ತಾಜ್.ಬೆಂಗಳೂರು
- 'ಬದುಕು' - ಒಂದು ಸಾಂಸ್ಕೃತಿಕ ಕಥನ — ಚಂಪಾವತಿ ಎಚ್.ಎಸ್.
- ಮಹಿಳೆ - ನೈತಿಕತೆ ಮತ್ತು ಸಮಾನತೆ — ಡಾ.ಶೈಲಾ.ಯು
- ಹಂಪಿ ಮಹಿಳಾ ವಿಶ್ವವಿದ್ಯಾನಿಲಯದ ಒಂದು ಸಂಭ್ರಮದ ದಿನ — ಎಚ್. ಎಸ್. ಸಿ
- ಮಹಿಳಾ ಅಧ್ಯಯನಕ್ಕೊಂದು ಶೈಕ್ಷಣಿಕ ಕೈಪಿಡಿ — ಗೀತಾ ಡಿ.ಸಿ
- " ಬಹು ಪತ್ನಿತ್ವ ಸರಿಯೇ ? " — ಎನ್. ಶೈಲಜಾ ಹಾಸನ್
- ದಾಳದ ಆಟ — ಎನ್. ಶೈಲಜಾ ಹಾಸನ್
- ವರ್ತುಲ — ಡಾ.ವಿನಯಾ


**ಮೈಸೂರು**

ಮೈಸೂರಿನಲ್ಲಿ ಓದುಗರು ಮಾನಸ ಪ್ರತಿಗಳಿಗಾಗಿ ಹಾಗೂ ಚಂದಾ ನವೀಕರಣಕ್ಕಾಗಿ ಸಂಪರ್ಕಿಸಿ
ವೆಂ.ವನಜ : 2329, 12ನೇ ಮೇನ್, 2ನೇ ಹಂತ ವಿಜಯನಗರ, ಮೈಸೂರು - 570 017

ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ,
ಪಂಚಾಯಿತಿ ರಸ್ತೆ, ಕಾಡುಗೋಡಿ-ಅಂಚೆ, ಬೆಂಗಳೂರು - 560 067

# ಸಂಪಾದಕೀಯ



ಮೇ 7, 2005 ರಂದು ಉತ್ತರ ಪ್ರದೇಶದ ಬಾಂದಾ ಜಿಲ್ಲೆಯ ಬಹುಂದಾರಿ ಹಳ್ಳಿಯಲ್ಲಿ ಮತ್ತೊಂದು ಸತಿ ಪ್ರಕರಣ ವರದಿಯಾಗಿದೆ. ಆಕೆಯ ಹೆಸರು ರಾಮ್ ಕುಮಾರಿ. 75 ವರುಷದ ವೃದ್ಧೆಯಾದ ಈಕೆ ತನ್ನ ಗಂಡ ಜಾಗೇಶ್ವರ್ ತಿವಾರಿಯನ್ನು ದಹಿಸಿದ ಬೆಂಕಿಯಲ್ಲಿಯೇ ಬೆಂದು ಬೂದಿಯಾಗಿದ್ದಾಳೆ ಎನ್ನುವುದು ಇಡಿಯ ಭಾರತದ ಜನತೆಗೆ ಆಘಾತಕರ ವಿಷಯವಾಗಿದೆ. ಜಾಗೇಶ್ವರ್ ತಿವಾರಿಗೆ 80 ವರ್ಷ ವಯಸ್ಸಾಗಿತ್ತು. ಈತ ಸತ್ತದ್ದು ದೀರ್ಘಕಾಲದ ಕಾಯಿಲೆಯಿಂದ. ಸಂಜೆಯ ಹೊತ್ತಲ್ಲಿ ಈತನನ್ನು ದಹಿಸಿಬಂದ ಬಂಧುಗಳು ರಾತ್ರಿ 9 ಘಂಟೆಯ ವೇಳೆಗೆ ರಾಮ್ ಕುಮಾರಿ ಇಲ್ಲದುದನ್ನು ಗಮನಿಸಿದ್ದಾರೆ. ಕೊನೆಗೆ ಈಕೆಯ ಸುಟ್ಟದೇಹ, ಕರಕಲಾದ ದೇಹ ಕಂಡುಬಂದದ್ದು ಈಕೆಯ ಗಂಡನನ್ನು ದಹಿಸಿದ ಜಾಗದಲ್ಲಿ. ಈಕೆಯ ಕುಟುಂಬದವರು ಪೋಲೀಸರಿಗೆ ಹೆದರಿ ತಲೆಮರೆಸಿಕೊಂಡಿದ್ದಾರೆ.

ರಾಮ್‌ಕುಮಾರಿಯ ಈ ನಿರ್ಧಾರದ ಹಿನ್ನಲೆ ಏನು ಎಂಬುದು ನಮಗೆ ಮುಖ್ಯವಾಗಿ ಗೊತ್ತಾಗಬೇಕಾದ ವಿಚಾರ. ವೃದ್ಧಾಪ್ಯದ ಒಂಟಿತನ, ಮಕ್ಕಳ ಅಸಡ್ಡೆ, ಆರ್ಥಿಕ ಅವಲಂಬನೆಯ ಹೆದರಿಕೆ ಇದರಲ್ಲಿ ಯಾವುದೂ ಕಾರಣವಾಗಿರಬಹುದು. ಕುಟುಂಬ ಅಪರೋಕ್ಷವಾಗಿ ಆಕೆ ಈ ನಿರ್ಧಾರ ತೆಗೆದುಕೊಳ್ಳುವುದಕ್ಕೆ ಕಾರಣವಾಗಿರಬಹುದು. ಆದರೆ ಇದ್ಯಾವುದೂ ಬೆಳಕಿಗೆ ಬರದೇ ಆಕೆ ಇತಿಹಾಸವಾಗುವುದು 'ಸತಿ' ಯಾದಳು ಎಂಬುದು, ಮಹಿಳೆಯರ ಬದುಕನ್ನು ಇನ್ನೂ ಅಸಹನೀಯಗೊಳಿಸುತ್ತವೆ.

ಪೋಲೀಸರ ನಿರ್ಲಕ್ಷ ಕೂಡಾ ರಾಮ್ ಕುಮಾರಿಯ ಸತಿ ಪದ್ಧತಿಗೆ ಇಂಬು ಕೊಡುವಂತಿದೆ. ಆ ವೃದ್ಧೆಯ ಮಗ ಜಾಸ್‌ಪುರ ಪೋಲೀಸ್ ಸ್ಟೇಷನ್‌ಗೆ 12 ಘಂಟೆಯ ಅವಧಿಯ ಒಳಗೆ ವೃದ್ಧೆಯ ಸಹಗಮನದ ವಿಚಾರ ತಿಳಿಸಿದ್ದಾರೆ. ಕರ್ತವ್ಯದಲ್ಲಿದ್ದ ಪೋಲೀಸ್ ಅಧಿಕಾರ ಈ ಬಗ್ಗೆ ಗುಲ್ಲು ಮಾಡದೇ ಸುಮ್ಮನಿರುವಂತೆ ಸೂಚಿಸಿದ್ದಾನೆಂದು ವರದಿಯಾಗಿದೆ. ಆದರೂ ವಿಚಾರ ಬಾಯಿಂದ ಬಾಯಿಗೆ ಹರಡಿ ಹಳ್ಳಿಯ ಜನರು ಆಕೆ ಸತಿಯಾದ ಸ್ಥಳದಲ್ಲಿ ಭಜನೆ, ಸ್ತೋತ್ರ ಹೇಳಿಕೊಂಡು, ಪ್ರದಕ್ಷಿಣೆ ಹಾಕಿ, 'ಜೈ ಸತಿ' ಎನ್ನುತ್ತಾ ಆ ಸ್ಥಳವನ್ನು ಪೂಜಾ ಸ್ಥಾನವಾಗಿಸಿದ್ದಾರೆ. ಈ ಹಂತದಲ್ಲಿ ಪೋಲೀಸರು ಇಲ್ಲಿಗೆ ಆಗಮಿಸಿರುವುದು. ಅಷ್ಟರಲ್ಲಿ ಅಲ್ಲೊಂದು ಸತಿ - ಕಲ್ಲು ಸ್ಥಾಪನೆಯಾಗಿದೆ. ಕೋಮುವಾದದ ವಿಕೃತ ಮನಸ್ಸುಗಳು - ಕೆಲಸ ಮಾಡುವ ಬಗೆಯನ್ನು, ಹಾಗೂ 'ಸತಿ' ಯ ವಿಜೃಂಭಣೆಯನ್ನು ನಾವು ಇಲ್ಲಿ ಕಾಣಬಹುದಾಗಿದೆ.

ಜನ ಮರುಳೋ, ಜಾತ್ರೆ ಮರುಳೋ ? ಪೋಲೀಸರ ನಿರ್ಲಕ್ಷ ಕಾರಣವೋ ? ಅಂತೂ ರಾಮ್ ಕುಮಾರಿ ಸತಿಯಾಗಿ. ಸತಿ ಕಲ್ಲಾಗಿ ಇತಿಹಾಸ ಸೃಷ್ಟಿಸಿದ್ದಾರೆ. ಒಂದು ಕಡೆ - ಲೈವ್ ಬ್ಯಾಂಡ್‌ನಲ್ಲಿ ಕುಣಿಯುವ ಯುವತಿಯರು, ಇನ್ನೊಂದಡೆ - ಸತಿ ಕಲ್ಲಾಗುವ ರಾಮ್ ಕುಮಾರಿಯಂತವರು ಈ ಜಾಗತೀಕರಣದ ಪ್ರಪಂಚದಲ್ಲಿ ಎರೆಡು ಉತ್ತುಂಗಗಳಾಗಿ, ಸಾಂಸ್ಕೃತಿಕ ಪ್ರತಿನಿಧಿಗಳಾಗಿ ಕಾಣಿಸಿಕೊಳ್ಳುತ್ತಿರುವುದು ನಮ್ಮ ನಡುವಿನ ದುರಂತ.

ಇತಿಹಾಸದೊಳಗೆ ನಿಗೂಢವಾಗಿರುವ ರಾಮ್ ಕುಮಾರಿಯ ಸಾವಿನ ಹಿನ್ನಲೆಯ ಶೋಧನೆ, ಕುಟುಂಬದ ಹಿನ್ನಲೆ, ಆಕೆಯ 75 ವರ್ಷಗಳ ಬದುಕಿನ ವಿವರಗಳ ಮೇಲೆ ಬೆಳಕು ಚಲ್ಲುವಂತಾದರೆ ಮಾತ್ರ ಆಕೆ 'ಸತಿ' ಯಾದಳೋ, ಅಥವಾ ಈ ಕ್ರೂರ ವ್ಯವಸ್ಥೆಗೆ ಮುಖ ಕೊಡಲಾರದೇ ಪಲಾಯನವಾದಿಯಾಗಿ ತನ್ನನ್ನು ಸುಟ್ಟು ಕೊಂಡಳೋ, ಅಥವಾ ಈ ವ್ಯವಸ್ಥೆ ಪರೋಕ್ಷವಾಗಿ ಆಕೆ ಆತ್ಮಹತ್ಯೆ ಮಾಡಿಕೊಳ್ಳುವುದಕ್ಕೆ ಒತ್ತಡ ಹಾಕಿ ಆಕೆ ಕಥೆಯಾದಳೋ ಎಂಬುದು ಸ್ಪಷ್ಟವಾಗಿ ನಮಗೆ ಅರ್ಥವಾಗುತ್ತದೆ.

- ಸಂಪಾದಕ ಮಂಡಳಿ

# ಶಕುಂತಲ ಕನ್ವರ್

ಅಂತರ್ ರಾಷ್ಟ್ರೀಯ ಮಹಿಳಾ ದಿನಾಚರಣೆಯ ಅಂಗವಾಗಿ ಯುನೈಟೆಡ್ ನೇಷನ್ ಅವರು ನವದೆಹಲಿಯಲ್ಲಿ ಆಯೋಜಿಸಿದ್ದ ಸಭೆಯಲ್ಲಿ ಮಹಾತ್ಮಾ ಗಾಂಧೀಯವರ ಮೊಮ್ಮಗಳ ಜೊತೆಗೆ ವೇದಿಕೆಯನ್ನು ಹಂಚಿಕೊಂಡವಳು ಶಕುಂತಳ ಕನ್ವರ್ !

ಇದರಲ್ಲೇನು ವಿಶೇಷವೆಂದು ಆಶ್ಚರ್ಯ ಪಡಬೇಡಿ. ಕೇವಲ 8ನೇ ತರಗತಿ ಓದಿದಂತಹ ಹಾಗೂ ರಾಜಸ್ಥಾನದ ಹಿಂದುಳಿದ ಒಂದು ಗ್ರಾಮದಿಂದ ಬಂದಂತಹ ಶಕುಂತಳ ಚುರುಗ್ರಾಮ ಪಂಚಾಯತಿಯ ಸರಪಂಚ್ ಆಗಿದ್ದಾಳೆ. ಕೇವಲ ಗೃಹಿಣಿಯಾಗಿದ್ದ ಶಕುಂತಳ ಇಂದು ಮಹಿಳಾ ಮೀಸಲಾತಿಯಿಂದ ಹಿಡಿದು ಲಿಂಗತ್ವ (Gender) ವಿಷಯಗಳ ಕುರಿತು ಮುಕ್ತವಾಗಿ ಮಾತಾನಾಡುವ, ಒಬ್ಬ ಉತ್ತಮ ಮಹಿಳಾ ಸರ್‌ಪಂಚ್ ಆಗಿದ್ದಾಳೆ.

ಅತ್ಯಂತ ಹಿಂದುಳಿದ ರಾಜ್ಯವಾದ ರಾಜಸ್ಥಾನದ ಚುರು ಜಿಲ್ಲೆಯ ಸರ್‌ಪಂಚ್ ಆಗಿರುವ ಶಕುಂತಲ ಕನ್ವರ್‌ಳ ದಿನ ಶುರುವಾಗುವುದೇ ಬೆಳಗಿನ ಜಾವ 5 ಗಂಟೆಗೆ ಹಾಗೂ ಮುಗಿಯುವುದು ರಾತ್ರಿ 11 ಗಂಟೆಗೆ. ಬೆಳಗಿನಿಂದ ಸಂಜೆಯವರೆಗೆ ಆಕೆ ತನ್ನ ಮನೆಯ ಕೆಲಸದ ಜೊತೆಗೆ ಸರ್‌ಪಂಚ್ ಹುದ್ದೆಯನ್ನು ಜವಾಬ್ದಾರಿಯುತವಾಗಿ ನಿರ್ವಹಿಸುವ ಮಹಿಳೆಯಾಗಿದ್ದಾಳೆ.

ರಾಜಸ್ಥಾನದಂತೇ ಬರಡುನಾಡಿನ ಚುರುವಿನಲ್ಲಿ ಕಡು ಬಡತನದಲ್ಲಿ ಜನಿಸಿದ ಶಕುಂತಲ ಕನ್ವರ್ ಓದಿರುವುದು ಕೇವಲ 8ನೇ ತರಗತಿ. ಅದು ಹೆಣ್ಣು ಮಗು ಎನ್ನುವ ಕಾರಣಕ್ಕೆ ಶಿಕ್ಷಣ ಕೊಡಿಸುವುದು ಬೇಡವೆಂದು ಆಕೆಯ ತಂದೆ ತಾಯಿ ನಿರ್ಧರಿಸಿದ್ದರು. ಅವರ ಮೇಲೆ ಒತ್ತಡ ಹೇರಿ 8 ನೇ ತರಗತಿಯ ಓದಿದ ಶಕುಂತಲ ಆ ಕಾಲಕ್ಕೆ ಶಿಕ್ಷಣದ ಮಹತ್ವ ಅರಿತಿದ್ದಳು. ಹದಿನಾರು ವರ್ಷಕ್ಕೆಲ್ಲಾ ಮದುವೆಯಾದ ಆಕೆ ಅದನ್ನು ವಿರೋಧಿಸುವ ಪರಿಸ್ಥಿತಿಯಲ್ಲಿರಲಿಲ್ಲ. ಏಕೆಂದರೆ ಅವರಲ್ಲಿ ಪರದ ಪದ್ಧತಿ ಇದೆ. ಪರದೆಯಿಂದ ಹೊರ ಬಂದು ಏನನ್ನೂ ಮಾತನಾಡುವಂತಿಲ್ಲ ಹಾಗೂ ಮುಖವನ್ನು ತೋರಿಸುವಂತಿಲ್ಲ. 50 ಡಿಗ್ರಿಯಷ್ಟು ತಾಪಮಾನವಿದ್ದರೂ ಮುಡಿಯಿಂದ ಅಡಿಯವರೆಗೂ ಸೆರಗನ್ನು ಹೊದ್ದುಕೊಂಡಿರಬೇಕಾದ ಸ್ಥಿತಿ. ಗಂಡಸರ ಮುಂದೆಯಂತು ಮಾತನಾಡುವಂತೆಯೇ ಇಲ್ಲ. ಇಂತಹ ವಾತವರಣದಲ್ಲಿ ಬೆಳೆದಂತಹ ಶಕುಂತಲ ಗಂಡನಿಗೆ ಬೇರೆ ಊರಿನಲ್ಲಿ ಕೆಲಸ ಸಿಕ್ಕಿ ಆಕೆಯನ್ನು ಜೊತೆಯಲ್ಲೇ ಕರೆದುಕೊಂಡು ಹೋದ.

ತಾನು ವಾಸಿಸುತ್ತಿದ್ದ ಮನೆಯ ಬಳಿಯೇ ಇದ್ದ ಆಸ್ಪತ್ರೆಗೆ ಚುರು ಗ್ರಾಮದಿಂದ ಬರುತ್ತಿದ್ದ ಗ್ರಾಮಸ್ಥರಿಗೆ ಸಣ್ಣ ಪುಟ್ಟ ಸಹಾಯ ಮಾಡಲು ಶುರು ಮಾಡಿದ ನಂತರ ಸ್ವಲ್ಪ ಸ್ವಲ್ಪವೇ ಪ್ರಸಿದ್ಧಳಾಗುತ್ತಾ ಬಂದಳು ಶಕುಂತಲ. ಚುರು ಗ್ರಾಮ ಪಂಚಾಯಿತಿಗೆ ಮಹಿಳಾ ಮೀಸಲಾತಿ ಮೇಲೆ ಸೀಟು ಪ್ರಕಟವಾದಾಗ ತಾನು ಸ್ಪರ್ಧಿಸಿದಳು. ಆ ಸಂದರ್ಭದಲ್ಲಿ ತನ್ನ ಕುಟುಂಬದವರಿಂದ ಕಠಿಣ ವಿರೋಧ ವ್ಯಕ್ತವಾಯಿತು. ಅವಳ ನಾದಿನಿಯರು ಈಕೆಗೆ ವಿರೋಧ ಒಡ್ಡಿದರು. ಜನ ಸಮುದಾಯಕ್ಕೆ ಸೇವೆ ಮಾಡಬೇಕೆಂಬ ಬಯಕೆ ಅಳವಾಗಿದ್ದ ಆಕೆ ಎದೆಗುಂದಲಿಲ್ಲ. ಸರಪಂಚ್ ಆಗಬೇಕೆಂಬ ಕನಸು ಕಂಡಿದ್ದಳು. ತನಗೆ ವಿರುದ್ಧವಾಗಿ ನಿಂತಿದ್ದಾಕೆಗೆ ಅಪಾರ ಹಣಬಲವಿತ್ತು ಹಾಗೂ ಓಟುಗಳನ್ನು ಕೊಂಡುಕೊಳ್ಳಲು ಮದ್ಯವನ್ನು ಹಂಚಿದ್ದಳು. ಇಂತಹ ಯಾವುದೇ ಸಹಾಯ ಪ್ರಭಾವವಿಲ್ಲದೇ ಕೇವಲ ತನ್ನ ಸ್ವಂತ ಬಲದಿಂದ ಗೆದ್ದು ಬಂದಳು.

ಈ ದಿನ ಅವಳ ಇಡೀ ಕುಟುಂಬವೇ ಆಕೆಯ ಬೆಂಬಲಕ್ಕೆ ನಿಂತಿದೆ.

ಶಕುಂತಲ ನಡೆಸುವ ಸಭೆಗಳಿಗೆ ತನ್ನ ಗ್ರಾಮದ ಮಹಿಳೆಯರು ಬರುವುದಿಲ್ಲ ಎಂಬ ಕೊರಗು ಆಕೆಗೆ ಇದೆ. ಆ ಮಹಿಳೆಯರಿಗೆ ಸಭೆಗಳಿಗೆ ಬರುವುದಕ್ಕೆ ಇಷ್ಟವಿದ್ದರೂ, ಅವರ ಗಂಡಸರು ಸಭೆಗಳಿಗೆ ಹೋಗುವುದಕ್ಕೆ ಬಿಡುವುದಿಲ್ಲ.

ರಾಜಸ್ಥಾನದಲ್ಲಿರುವ ಸುಮಾರು ಸರಪಂಚ್‌ಗಳು ಈಗಲೂ ತಮ್ಮ ಸೆರಗನ್ನು ಹೊದ್ದುಕೊಂಡೆ ಇರುತ್ತಾರೆ. ಅವರ ಗಂಡಂದಿರು ಅವರ ಪರವಾಗಿ ಮಾತಾನಾಡುತ್ತಾರೆ. ಆದರೆ ಶಕುಂತಲ ಆ ರೀತಿ ಇರಲಿಲ್ಲ. ಎಲ್ಲವನ್ನು ಸ್ವಂತವಾಗೇ ಯೋಚಿಸುತ್ತಾಳೆ ಹಾಗೂ ನಿರ್ಧಾರ ತೆಗೆದುಕೊಳ್ಳುತ್ತಾಳೆ. ಇದಕ್ಕೆ ತನ್ನ ಗಂಡನಿಂದ ಯಾವುದೇ ತರಹದ ವಿರೋಧವಿರವಿಲ್ಲ.

ಶಕುಂತಲ ಸರ್‌ಪಂಚ್ ಆದ ಮೇಲೆ ತನ್ನ ಬರಡು ಕ್ಷೇತ್ರದ ಮಹಿಳೆಯರಿಗೆ ಸಹಾಯ ಮಾಡಲು ನೀರು ಸಂರಕ್ಷಣೆಗೆ ಸಂಬಂಧಿಸಿದ ಅನೇಕ ಯೋಜನೆಗಳನ್ನು ತಂದಳು. ನೀರಿಗಾಗಿ ಮೈಲುಗಟ್ಟಲೆ ಓಡಾಡಬೇಕಿತ್ತು. ತನ್ನ ಕ್ಷೇತ್ರದ ಮಹಿಳೆಯರನ್ನು ಬೇರೆ ಇದ್ದಂತಹ ನೀರು ನಿರ್ವಹಣಾ ಪದ್ಧತಿಗಳನ್ನು ತೋರಿಸಲು ಕ್ಷೇತ್ರ ಪ್ರವಾಸಗಳಿಗೆ ಕರೆದೊಯ್ದಳು. ಹೆಣ್ಣು ಮಕ್ಕಳಿಗಾಗಿ ಶಾಲೆಯನ್ನು ಪ್ರಾರಂಭಿಸಿ, ನಾಲ್ಕು ಧರ್ಮಶಾಲೆ, ಒಂದು ಅಂಗನವಾಡಿ ಕೇಂದ್ರವನ್ನು ತೆರೆದಳು. ಮಹಿಳೆಯರ ಸಬಲೀಕರಣಕ್ಕೆ ತುಂಬಾ ಪ್ರಾಮಾಣಿಕ ಪ್ರಯತ್ನ ಮಾಡಿದಳು. ಹಾಗೆಯೇ ಪುರುಷರಿಗೂ ಸಹ ಸಮಾನತೆಯ ಕುರಿತು ತಿಳಿಸಿಕೊಡುತ್ತಿದ್ದಳು. ಹೀಗೆ ತಾನು ಸರ್‌ಪಂಚ್ ಆದ ನಂತರ ಹಲವಾರು ಕಾರ್ಯ ಕ್ರಮಗಳನ್ನು ಹಮ್ಮಿಕೊಂಡಳು.

ಜಿಲ್ಲಾ ಆಡಳಿತದಲ್ಲಿ ತುಂಬಿ ತುಳಕಾಡುತ್ತಿದ್ದ ಭ್ರಷ್ಟಚಾರ ಶಕುಂತಲಳನ್ನು ಕಾಡಿತ್ತು. ಆಕೆಯು ತರುವ ಎಲ್ಲಾ ಯೋಜನೆಗಳಿಗೂ ಅಡ್ಡಗಾಲು ಹಾಕುತ್ತಿದ್ದರು. ಇವುಗಳ ನಡೆವೆಯೂ ಹೋರಾಟ ನಡೆಸಿ ತನ್ನ ಗ್ರಾಮಕ್ಕಾಗಿ ಯೋಜನೆಗಳನ್ನು ಮಂಜೂರು ಮಾಡಿಸಿಕೊಳ್ಳುತ್ತಿದ್ದಳು.

ರಾಜಸ್ಥಾನದ ಮಹಿಳೆಯರು ಅಸಹಾಯಕರು. ಅವರನ್ನು ಸ್ವೇಚ್ಛಾಚಾರ / ಸ್ವಾತಂತ್ರವಾಗಿ ಇರಲು ಬಿಡಿ ಎಂದು ಅಲ್ಲಿನ ಪುರುಷರಿಗೆ ಹೇಳುತ್ತಲೇ ಇರುತ್ತಾಳೆ. ಅಲ್ಲಿನ ಮಹಿಳೆಯರು ಸುಮಾರು 20 ಗಂಟೆಗಳ ಕಾಲ ದುಡಿಯುತ್ತಾರೆ. ಮನೆ ಕೆಲಸದ ಜೊತೆ ಹೊಲಗದ್ದೆಗಳ ಕೆಲಸವನ್ನು ನಿರ್ವಹಿಸುತ್ತಾರೆ. ಆದರೆ ಪುರುಷರು ಹಣ ಬಂದ ತಕ್ಷಣ ಕುಡಿದು, ಇಸ್ಪೀಟು ಆಡುವ ಜೊತೆಗೆ ತಮ್ಮ ಹೆಂಗಸರನ್ನು ಬೈಯುತ್ತಾ ಇರುತ್ತಾರೆ. ಈಗ ತನ್ನ ವಿಭಾಗದಲ್ಲಿ ಎಲ್ಲಾ ಮಹಿಳೆಯರನ್ನು ಒಂದಡೆ ಸೇರಿಸುವುದು, ಅವರಿಗೆ ಆರೋಗ್ಯ ತಪಾಸಣೆ ಮಾಡಿಸುವುದು, ಕುಟುಂಬ ಯೋಜನೆ ಕುರಿತು ಅರಿವು ಮೂಡಿಸುವಂತಹ ಕಾರ್ಯವನ್ನು ಮಾಡಿದ್ದಾಳೆ.

ವಸುಂಧರ ರಾಜೆ ಸಿಂಧ್ಯಾಳ ಅಭಿಮಾನಿಯಾದ ಶಕುಂತಳ ರಾಜಕೀಯದಲ್ಲಿ ಇನ್ನೂ ಎತ್ತರದ ಸ್ಥಾನಕ್ಕೆ ಹೋಗಬೇಕೆಂದು ಆಸೆ ಇರುವವರು. ರಾಜಕೀಯದಲ್ಲೇ ತನ್ನ ಭವಿಷ್ಯ ರೂಪಿಸಿಕೊಳ್ಳಬೇಕೆಂದು ಕೊಂಡಿರುವವಳು.

ಇಷ್ಟೆಲ್ಲಾ ಜನಪರ ಆಲೋಚನೆಗಳು ಇದ್ದರೂ ತನ್ನ ಹೆಣ್ಣು ಮಕ್ಕಳು ಅನ್ಯ ಜಾತಿಯ ಹುಡುಗರನ್ನು ಮದುವೆಯಾಗಲು ಒಪ್ಪುವುದಿಲ್ಲ. ಏಕೆಂದರೆ ಆಕೆಯ ಕ್ಷೇತ್ರದಲ್ಲಿ ಅಂತರ್‌ಜಾತಿಯ ಮದುವೆಗೆ ವಿರೋಧವಿದೆ.

ತನ್ನ ಇಬ್ಬರೂ ಹೆಣ್ಣು ಮಕ್ಕಳಿಗೂ ಹಾಗೂ ಎರಡು ಗಂಡು ಮಕ್ಕಳಿಗೂ ಶಿಕ್ಷಣ ಕೊಡಿಸುವಂತೆ ಮನೆಯಲ್ಲಿ ಬಲವಂತ. ಎಲ್ಲರಿಗೂ ಶಿಕ್ಷಣ ಕೊಡಿಸಿದ್ದಾಳೆ. ತಾಯಿಯ ಸಾಧನೆ ಬಗ್ಗೆ ಈಕೆಯ ಮಕ್ಕಳಿಗೆ ಹೆಮ್ಮೆ. ತಮ್ಮ ತಾಯಿ ನಡೆದ ಹಾದಿಯಲ್ಲೇ ನಡೆಯಬೇಕೆಂಬುದು ಅವರ ಆಸೆ. ಆಕೆಯ ಎಲ್ಲಾ ಕಾರ್ಯಗಳಿಗೂ ಸಹಕಾರ ನೀಡುತ್ತಾರೆ.

ಮಹಿಳೆಯರಿಗೆ ಮೀಸಲಾತಿ ಇರಬೇಕೆಂದು ಪ್ರತಿಪಾದಿಸುವ ಶಕುಂತಲ, ಮೀಸಲಾತಿಗಾಗಿ ಹೋರಾಟ ಮಾಡಬೇಕೆನ್ನುತ್ತಾಳೆ. ಪುರುಷರಲ್ಲಿ ಇರುವ ಪೂರ್ವಾಗ್ರಹ ಆಲೋಚನೆಗಳನ್ನು ಹೋಗಲಾಡಿಸಲು ಅವರಿಗೆ ಶಿಕ್ಷಣ ನೀಡಬೇಕೆಂದು ನಂಬುತ್ತಾಳೆ. ಶಿಕ್ಷಣವೊಂದೇ ಪುರುಷ ಮಹಿಳೆಯಲ್ಲಿರುವ ಅಸಮಾನತೆಯನ್ನು ಹೋಗಲಾಡಿಸುತ್ತದೆ. ಆರ್ಥಿಕವಾಗಿ ಸ್ವಾವಲಂಬನೆ ಪ್ರತಿ ಮಹಿಳೆಗೂ ಇರಬೇಕೆಂದು ಪ್ರತಿಪಾದಿಸುವ ಶಕುಂತಲ ತನ್ನ ಕ್ಷೇತ್ರದ ಮಹಿಳೆಯರು ಸ್ವಾವಲಂಬನೆಯ ಜೀವನ ನಡೆಸಿ, ಆದಾಯ ಗಳಿಸಲು ಖಾದಿ ಕೇಂದ್ರದಿಂದ ಯೋಜನೆಗಳನ್ನು ತರಲು ಪ್ರಯತ್ನಿಸುತ್ತಿದ್ದಾಳೆ. ಆಕೆಯ ಈ ಪ್ರಯತ್ನ ಹಾಗೂ ಹೋರಾಟಕ್ಕೆ ಯಶಸ್ಸು ಸಿಗಲಿ ಎಂದು ಹಾರೈಸೋಣ.

ಕರ್ನಾಟಕದಲ್ಲೂ ಇತ್ತೀಚೆಗೆ ಗ್ರಾಮಪಂಚಾಯಿತಿ ಚುನಾವಣೆಗಳು ನಡೆದಿವೆ. ಆರಿಸಿ ಬಂದಿರುವ ಮಹಿಳೆಯರು ತಮ್ಮ ಗ್ರಾಮದ ಅಭ್ಯುದಯಕ್ಕಾಗಿ ಶಕುಂತಳ ಕನ್ವರ್ ತರಹ ಹಲವಾರು ಅಭಿವೃದ್ಧಿ ಕಾರ್ಯಗಳನ್ನು ಹಮ್ಮಿಕೊಂಡಿದ್ದೇ ಆದರೆ ಮಹಾತ್ಮಾ ಗಾಂಧಿ ಕಂಡಂತಹ ಕನಸು ನನಸಾಗುವ ದಿನಗಳು ದೂರವಿಲ್ಲ.

ಶ್ಯಾಮಲ ಕೋಲಾರ.

(ಲಲಿತ ಪನಿಕ್ಕರ ಜೊತೆ ಶಕುಂತಲ ಕನ್ವರ್ ಹಂಚಿಕೊಂಡ ಅನುಭವಗಳನ್ನಾಧರಿಸಿ, ಈ ಲೇಖನ ತಯಾರಿಸಿದೆ. ಆಧಾರ 'New Woman' (ದಿ ಟೈಮ್ಸ್ ಆಫ್ ಇಂಡಿಯ ಮಾರ್ಚ್ 8, 2005)

# ತಿರುಗಿ ( ಮತ್ತೆ ಬೆಳಗಾಗುವುದು)

ತಿರುಗಿ ಕತ್ತಲಲ್ಲಿ ಕೂರಬೇಡ
ಗೆಳತಿ ಮತ್ತೆ
ಬೆಳಗಾಗುವುದು ದಿನದಲ್ಲಿ
ಖಾಲಿಗೊಳದಲ್ಲಿ ಎಲ್ಲಾ
ಎಳೆ - ಎಳೆದು ಬಗೆಯಬೇಕು
ಚಿಮ್ಮುವ ತಿಳಿನೀರಿನಲ್ಲಿ
ಕಂದ ಮೀಯಬೇಕು
ತಿರುಗಿ ಕತ್ತಲಲ್ಲಿ ಕೂರಬೇಡ
ಗೆಳತಿ ಮತ್ತೆ ನಾಳೆ ಬೆಳಗಾಗುವುದು

ದಿನದಲ್ಲಿ ಹಳೆಯ ಕನಸಿಗೆ ಕುಂಚ
ಹಿಡಿಯಬೇಡ
ಉಟ್ಟು ಬಿಟ್ಟಿದ್ದ
ಸೀರೆಯ ನೆರಿಗೆ
ಎಣಿಸಬೇಕು
ಆ ಖಾಲಿ ಗೊಳದಲ್ಲಿ
ಎಲ್ಲಾ ಜಾಳು-ಜಾಳು
ತಿರುಗಿ ಕತ್ತಲಲ್ಲಿ ಕೂರಬೇಡ ಗೆಳತಿ
ಮತ್ತೆ ಬೆಳಗಾಗುವುದು ದಿನದಲ್ಲಿ

ನಾ ತಂದ ಉಡುಗರೆಗೆ
ಅಂದು ಬೆಲೆ ಬರುವುದು
ನೀ ಮಿಂದು ಉಡುಗರೆಯ ಎಳೆದಾಗ
ತಿರುಗಿ ಕತ್ತಲಲ್ಲಿ ಕೂರಬೇಡ
ಗೆಳತಿ ಮತ್ತೆ ಬೆಳಗಾಗುವುದು ದಿನದಲ್ಲಿ

ತಾಜ್.
ಬೆಂಗಳೂರು

# 'ಬದುಕು' - ಒಂದು ಸಾಂಸ್ಕೃತಿಕ ಕಥನ

**ಚಂಪಾವತಿ ಹೆಚ್.ಎಸ್**

'ಬದುಕು' ಕಾದಂಬರಿ ಸುತ್ತುವುದು ದಲಿತರು, ಮಾದಿಗರು, ಕಾಟಿಗರು, ಇಂತಹ ಕೆಳವರ್ಗದ ಝೋಪಡಿ ಜನಾಂಗದವರ ಸುತ್ತ. ಇವರಲ್ಲೇ ಮಧ್ಯಮ ವರ್ಗದಲ್ಲಿರುವ ಮಲ್ಲಪ್ಪ ಜಮಾದಾರರು ಹಾಗೂ ಅವರ ಕುಟುಂಬ 'ಬದುಕು' ಕಾದಂಬರಿಯ ಕೇಂದ್ರ ಬಿಂದುವಾದರೂ, ಇವರ ಸುತ್ತ ಬದುಕಿನಲ್ಲಿ ಜೋಗಿಣಿಯರಿದ್ದಾರೆ, ಮುಸ್ಲಿಂ ಕುಟುಂಬಗಳಿವೆ. ಗುಳೇ ಹೋಗುವ ಮಂದಿ, ಗೌಡರು, ಬ್ರಾಹ್ಮಣರು, ಮಾದಿಗರು, ಹೊಲೆಯರು ಎಲ್ಲರಿದ್ದಾರೆ. ಜಮಾದಾರರ ಕುಟುಂಬದೊಳಗೆ ಹಾಸು ಹೊಕ್ಕಿರುವ ಫತರೂ ಇದ್ದಾನೆ,ನಜಮಾ, ನಾಗವ್ವಾಯಿ - ಹೀಗೆ ಹತ್ತು ಹಲವು ಜಾತಿಯ ಜನ ಕುಟುಂಬದ ಕತೆಗೆ ತೆಕ್ಕೆ ಹಾಕಿಕೊಂಡಿದ್ದಾರೆ. ಈ ತಕ್ಕೆಯಲ್ಲಿ ಈ ಕುಟುಂಬದ ಬದುಕಿನ ನೇಯ್ಗೆಯಲ್ಲಿ ಯಾವುದ್ಯಾವುದೋ ಜಾತಿ, ಧರ್ಮ, ಪಂಗಡದವರಿದ್ದಾಗ್ಯೂ - ಕುಡಿತ, ಮಾಂಸ, ದೇವರು ಇವರೆಲ್ಲರಲ್ಲೂ ಲಿಂಗಭೇದವಿಲ್ಲದ, ಜಾತಿ ಬೇಧವಿಲ್ಲದ ಒಂದು ಬೆಸುಗೆಯನ್ನು ಹಾಕಿದೆ. ರಕ್ತ ಸಂಬಂಧವಿಲ್ಲದಿದ್ದರೂ ಫತರೂ ಮಲ್ಲಪ್ಪ ಜಮಾದಾರರ ಮಗ. ನಾಗವ್ವಾಯಿ ಏನೂ ಸಂಬಂಧವಿಲ್ಲದಿದ್ದರೂ ಇಡೀ ಕುಟುಂಬಕ್ಕೆ ಆಯಿ. ಹೀಗೆಯೇ ಹಳ್ಳಿಯ ಪ್ರತಿ ಸಂಬಂಧಗಳೂ ಕಾಕ, ಆಯಿ, ಚಿಗಪ್ಪ, ಚಿಗವ್ವ. ಸಂಬಂಧಗಳಿಲ್ಲದಿದ್ದರೂ ಸಂಬಂಧಗಳ ಮೂಲಕ ಕಥೆ ಬಿಚ್ಚಿ ಕೊಳ್ಳುತ್ತಾ ಹೋಗುವುದರಿಂದ 'ಬದುಕು' ಕಾದಂಬರಿಯ ಪಾತ್ರಗಳು ಮಲ್ಲಪ್ಪ ಜಮಾದಾರರ ಜೋಡಿ, ಮಲ್ಲಮ್ಮನ ಜೋಡಿ, ಕಾಶಮ್ಮ ಬೆಳ್ಳಿ, ಫತರೂ ಜೋಡಿ ಬೆಳೆಯುತ್ತಲೇ ಹೋಗುತ್ತವೆ. ಈ ಎಲ್ಲಾ ಸಂಬಂಧಗಳಲ್ಲಿ ಬದುಕಿನ ಜೀವಂತಿಕೆ ಇದೆ, ಹುಮ್ಮಸ್ಸು, ಧಾವಂತ, ಲವಲವಿಕೆ, ಸರಸ, ವಿರಸ ಎಲ್ಲಾ ಇದೆ.

ಕಾದಂಬರಿ ಪ್ರಾರಂಭವಾಗುವುದು ಹೀಗೆ : "ಸಾಲು ಗುಡ್ಡದ ನೆತ್ತಿಯ ಮೇಲೆ ಆಕಾಸಂಬೋ ಆಕಾಸದ ಮಾರಿಯೆಲ್ಲಾ ಜಾಜ ಒರೆಸಿದಂಗಾಗಿ ಕೆಂಪಗೆ ಲಾಲ್ ಲಾಲ್ ಆಗಿತ್ತು"... (p1) ಗೀತಾ ನಾಗಭೂಷಣ್‌ರವರ ಭಾಷೆ ಮಹದೇವರ, ಕುವೆಂಪು, ಬೇಂದ್ರೆಯವರ ಭಾಷೆಯ ಸಾಂದ್ರತೆಯನ್ನು ಒಟ್ಟೊಟ್ಟಿಗೇ ನೆನಪಿಸಿಕೊಡುತ್ತದೆ. ಭಾಷೆಯ ಮೇಲೆ ಅತ್ಯಂತ ಸರಾಗವಾದ, ಸಹಜವಾದ ಹಿಡಿತ ಹೊಂದಿರುವ ಗೀತಾರವರು ಆಡು ನುಡಿಯಲ್ಲಿ ಸಂಬಂಧ ಹಾಗೂ ಬದುಕುಗಳ ಜೀವಂತಿಕೆ ಕಟ್ಟಿ ಕೊಡುತ್ತಾರೆ.

ಭಾಷೆಯ, ವರ್ಣನೆಯ ಕಾವ್ಯಾತ್ಮಕತೆ ಕಾದಂಬರಿಯ ಅತಿ ದೊಡ್ಡ ಪಾಸಿಟೀವ್ ಅಂಶ ಎಂದರೆ ತಪ್ಪಾಗಲಾರದು. ಪಾತ್ರಗಳ ಭಾವನೆಗೆ ಅನುಗುಣವಾಗಿ ಕೂಡಾ ಪರಿಸರದ ವರ್ಣನೆ ಬರುವುದು. ಭಾಷೆ, ವರ್ಣನೆಯ ಸಹಜತೆಯನ್ನು ಹೆಚ್ಚಿಸಿದೆ.

'ನನ್ನ ಹಾಟ್ಯಾ, ನಿನ್ನವ್ವನ....ಬೋಸುಡಿಕೆ' ಎಂದೇ ಪ್ರಾರಂಭವಾಗುವ ಮಾತುಗಳು ಆತ್ಮೀಯತೆ, ಸರಸ, ವಿರಸ ಎಲ್ಲವನ್ನೂ ಒಟ್ಟಿಗೇ ಕಟ್ಟಿ ಕೊಡುತ್ತದೆ. ಸಂಬಂಧಗಳ ಒಳಗಿನ ಬೆಚ್ಚಗಿನ ಭಾವನೆಗಳನ್ನು ಬಿಚ್ಚಿ ಇಡುತ್ತದೆ.

ಸಿಂಧಿ ಬನದಾಗಿನ ಸಾಬ - ಮಲ್ಲಪ್ಪ ಜಮಾದಾರರನ್ನು 'ಕಾಕ' ಎನ್ನುತ್ತಾನೆ. ಕಲಬುರ್ಗಿಯಿಂದ ಮಗಳು, ಮೊಮ್ಮಕ್ಕಳು, ಬರ್ತಾರಂತ ಯಾಲಕ್ಕಿ ಗಿಡದ ಸಿಂದಿ ತೆಗೆದಿಡು ಅಂತ ಮಲ್ಲಪ್ಪ ಜಮಾದಾರ ಸಾಬನಿಗೆ ಹೇಳುತ್ತಾನೆ.

ಆಗ ಸಾಬ ಹೇಳುತ್ತಾನೆ,

"ಯಾಲಕ್ಕಿ ಗಿಡಗೋಳ್ 'ನೀರಾ' ಅಂದ್ರೆ ಇದರವ್ವನಾ ತಂದು ..... ಬೆಳ್ಳಗೆ ಬುರುಗು ಬಂದು ಮಸ್ ಮಸ್‌ಂತ ಮಸ್‌ಗರೀತಿರ್‍ತದ ಪಾ... ಆಟು ದೂರ ಇರಟಿಗೆ ಘುಮ್ಮಂತ ಇಲೇಚಿ ವಾಸ್ನಿ ಮೂಗೀಗೆ ಬಿಡ್ತು ಬಾಯಾಗ ನೀರು ಕಡಸ್ತರ ಮಗಂದು......... ಕುಡ್ಯಾಕಿಂತ ಬಾ.... (ಪು 3).

ಈ ಪೂಜಾರಪ್ಪ ನೀರಾ ಕುಡೀ ಬೇಕು ಅನ್ನಿಸಿದಾಗ ಬಂದು ಪೂಜೆ ಮಾಡುತ್ತಾನೆ. ಹೀಗೆ ಹಾಸ್ಯ ಮಾಡುತ್ತಲೇ ಪೂಜಾರಿಯನ್ನು ಒಪ್ಪಿಕೊಂಡು ಬಿಡುತ್ತಾರೆ ಈ ಜನ.

ಮಲ್ಲಪ್ಪ ಜಮಾದಾರನ ಹಾದರದ ಬದುಕಿಗೆ ಮಲ್ಲಮ್ಮ ವಿರೋಧಿಸಿದಾಗ ಮಲ್ಲಪ್ಪ ಜಮಾದಾರ :

"..... ಇದರವ್ವನಾ ಬಿಕನಾಸಿಗೆ ತಂದೂ...... ಮೈ ಹಿಂಡದ್ರ ಒಂದು ಮಟಗಿ ಖಂಡಾ ಇಲ್ಲ.........., ಘಣಾದ ಬಾಯಾಗಿಟ್ಟು ತಿರುಗಿಸಿದ್ರೂ ಒಂದು ಬಗಸಿ ರಕ್ತ ಬರಂಗಿಲ್ಲ, ಸೊಟ್ಟ ಕುಂಡೀದು, ಒಣ ಮಾರಿದ್ದಕ್ಕೆ ತಂದು ನನ್ ಕುತಗಿಗೆ ಉರಲು ಹಾಕಿ ಹೋಗ್ಯಾನ್ ನಮ್ಮಪ್ಪ ಭ್ಯಾಡ್ಯಾನ ಮಗ......"

ಹೀಗೆ ಬಯ್ಯುತ್ತಲೇ, ಮಲ್ಲಪ್ಪ ಜಮಾದಾರ ಆಕಿ ಜೋಡಿ ಸಂಸಾರ ಮಾಡುತ್ತಾನೆ. ಹೀಗೆ ಬಯ್ಯಸಿಕೊಳ್ಳುತ್ತಲೇ ಮಲ್ಲವ್ವ ಅವನನ್ನು ತನ್ನ ಸಂಸಾರಕ್ಕೆ ಬಗ್ಗಿಸಿಕೊಳ್ಳುತ್ತಾಳೆ.

ಮಲ್ಲಪ್ಪ ಜಮಾದಾರ ತನ್ನ ಮಗಳಿಗೆ ಹೇಳುತ್ತಾನೆ : 'ಅಲ್ಲವಾ ಕಾಶೀ...ನೀ ಏಟು ಚಲುವಿದ್ದೀ ಅಂತ ಗೊತ್ತಿಲ್ಲ ಮಗಾ.... ಸುಕವಾರ ದಿನ ಆ ಗುಡ್ಯಾಗಿನ ಲಗಸಿಮಿಗಿ ಕೆಂಪು ಸೀರಿ ಉಡ್ಸಿ ಹಣೆ ತುಂಬಾ ಕುಂಕುಮ ಹಚ್ಚಿ ಪೂಜಾ ಮಾಡ್ತಾರಲ್ಲ, ಆ ಲಗಸಿಮಿ ಗೊಂಬಿ ಹಂಗಿದ್ದೀ ನೀನು .......' (13 ಪು)

'ಲಗಸಿಮಿ', 'ಸುಕವಾರ' ಈ ಪದಗಳು ಉತ್ತರ ಕರ್ನಾಟಕದ ಭಾಷೆಯೂ ಆಗಿರಬಹುದು. ಹಾಗೆಯೇ ಒಂದು ನಿರ್ದಿಷ್ಟ ಜಾತಿಗಳ ಜನಗಳ ಭಾಷೆಯ ಅಭಿವ್ಯಕ್ತಿ ಕೂಡಾ ಆಗಿದೆ.

ಮಲ್ಲಮ್ಮ ಹೇಳುವ ಈ ಮಾತು ಕೂಡಾ ಕೆಳಸ್ತರದ ಜನಾಂಗದ ಭಾಷೆಯ ಸತ್ವವನ್ನು ಎತ್ತಿ ಹಿಡಿಯುತ್ತದೆ.

ಕೋಳಿಮರಿಯೊಂದನ್ನು ಹದ್ದು ಎತ್ತಿಕೊಂಡು ಹೋದಾಗ ತಾಯಿ ಕೋಳಿ ಮರಿಗಳನ್ನು ಬಯ್ಯುತ್ತಾ ಮಲ್ಲವ್ವ ಹೇಳುತ್ತಾಳೆ ; " ... ಕೂಸಿಗೆ ಹದ್ದು ಹೊಡ್ಕೊಂಡ್ಹೋಗಿದ್ದ ಖಬರಿಲ್ದೆ ಮತ್ತೆ, ಎಳಿದ ಮರಿಗೋಳಿಗಿ ಕಟ್ಕೊಂಡು ನೆಲ ಕೆದರ್ತಿರಲ್ಲೇ ಸೂಳ್ಯಾರೇ.... ನಿಮಗೆ ನಿಮ್ಮಕ್ಕಳ ಮ್ಯಾಲ ಒಂದೀಟರೆ ಪಿರೀತಿಯಿಲ್ಲೇನ್ರೇ ಕೋಳಿಗಳೇ ...... ಹಾದರಕ್ಕ ಹಡದಿರೇನ್ರೇ ಹಡಸಿಗೋಳ್ರೆ...." (ಪು 15)

ಗೀತಾ ನಾಗಭೂಷಣ್‌ರವರು - ಜೋಗಿಣೆಯರ ಬದುಕಿನ ಮುಖಗಳನ್ನು ಐದಾರು ಪಾತ್ರಗಳ ಮೂಲಕ ಬಿಚ್ಚಿಡುತ್ತಾರೆ. ಚುಂಚೂರ ಮಾಮರ ತಾಯಿಗೆ - ಮರಗಿ, ಭರಮ್ಯಾ ಹರಕೆ ತೀರಿಸಲಿಕ್ಕಾಗಿ ನೀಲವ್ವನ ಜೋಗಿಣೆ ಬಿಡುವುದು, ಆಕೆ ಪ್ರೀತಿಸಿದ ತುಕಾರಾಂನ ಮದುವೆಯಾಗಲು ಇಷ್ಟ ಪಡುವುದು, ಒತ್ತಾಯದಿಂದ ಆಕೆ ಜೋಗಿಣೆಯಾದಾಗ ತುಕ್ಯಪ್ಪ ಕೆಟ್ಟ, ಹೆಣ್ಣ ನಾ ಮದವಿ ಆಗಲ್ಲ ಅಂತಂದಾಗ - ನೀಲವ್ವ ಬಾವಿಗೆ ಬಿದ್ದು ಜೀವ ಕಳೆದುಕೊಳ್ಳುತ್ತಾಳೆ.

ಮಲ್ಲವ್ವ ಹೇಳುತ್ತಾಳೆ, "..... ಆ ದೇವಿತಿ ಈ ಹೆಣ್ಣು ಪೋರಿಗೊ ಜೋಗಣೆಯಾಗಿ ಹಾದರ ಮಾಡಂತ ಹೇಳ್ತಾಳಂತೆ ? ಆಕಿನೂ ಹೆಣ್ಣಲ್ಲ ? ದೇವರಾದ್ರೇನು ದೆವ್ವಾದ್ರೇನೂ.... ಹೆಣ್ಣು, ಹೆಣ್ಣೇ ಅಲ್ಲೇನು ? ಹಿಂತಾ ಹಲ್ಕಟ್ ಹರಕೆ ಮಾಡ್ರಿ ಅಂತ ಹೇಳ್ತಾಳೇನ್ರಿ ದೇವಿ.... ಮತ್ತೆ ಹಿಂತಾ ಹರಕೆ, ಅದೇ ಕೆಳ ಜಾತಿ ಮಂದೀನೇ ಮಾಡ್ತಾರ .... ಮ್ಯಾಲಿನ ಜಾತಿ ಮಂದಿ ತಮ್ಮ ಹೆಂಗಸರಿಗೆ ಹೀಂಗ್ ಜೋಗಣೆ ಬಿಡ್ತಾರಾ ಎಂದರೆ ?....." (ಪು 67)

ಹೀಗೆ ಲೇಖಕಿ ಜೋಗಿಣೆಯರ ಬಗ್ಗೆ ಒಂದು ಟೀಕೆಯನ್ನು ಆ ಪದ್ಧತಿಯ ಅಮಾನಷತೆಯನ್ನು ಎತ್ತಿ ಹಿಡಿಯುತ್ತಾರೆ. ಹೀಗೆಯೇ ಕುಲದೇವರು ಚುಂಚೂರ ಮಾಪುರವ್ವಗೆ ಹರಕೆಯಿಂದಾಗಿ ದುರ್ಗಿ-ಮರ್ಗಿ ಜೋಗಿಣೆಯರಾಗುತ್ತಾರೆ. ಇವರು ಮಾದರ ಕೇರಿಯ ಮಾನಿಂಗಪ್ಪನ ಅವಳಿ-ಜವಳಿ ಹೆಣ್ಣು-ಮಕ್ಕಳು. ಮಾನಿಂಗಪ್ಪ ಮಾಳವ್ವರಿಗೆ ಮಕ್ಕಳು ಜನಿಸದಿದ್ದಾಗ ಚೊಚ್ಚಲ ಮಗು ಹೆಣ್ಣಾದ್ರೆ ತಾಯಿ ಸೇವಕ್ಕೆ ಬಿಡುವುದಾಗಿ ಹೇಳಿ ಕೊಳ್ಳುತ್ತಾರೆ. ಎರಡೂ ಹೆಣ್ಣಾದಾಗ, ಹಿರಿಯರ ಆಣತಿಯಂತೆ ಎರಡೂ ಮಕ್ಕಳನ್ನು ಜೋಗಿಣೆಯರನ್ನಾಗಿ ಬಿಡುತ್ತಾರೆ. ಈ ದುರ್ಗಿ - ಮರ್ಗಿ ಜೋಡಿಯಾಗಿ

ಬನ್ನಿ ಗಿಡದ ಮಾಪುರಿ
ಬಯಲಾಗ್ ನಿನ್ ಜಾತಾರೀ
....ಉಧೋ..... ಉಧೋ.... ಮಾಪುರವ್ವ ..... ಪು (202)

ಈ ರೀತಿಯ ಸಾಮಾಜಿಕ ಪದ್ಧತಿಗಳ ಬಗ್ಗೆ ಈ ಪುಸ್ತಕ ಒಂದು ಸಾಂಸ್ಕೃತಿಕ ಅಧ್ಯಯನಕ್ಕೆ ನೋಟವನ್ನು ಕೂಡಾ ಒದಗಿಸಬಹುದು. ಜೋಗಣೆಯಾಗಿ ಬಿಡುವ ಪದ್ಧತಿಯ ಬಗ್ಗೆ ಕಟುವಾದ ಟೀಕೆಯೊಂದು 'ಬದುಕು' ಕಾದಂಬರಿಯಲ್ಲಿ ಮೂಡಿ ಬಂದಿದೆ.

ತುಳಜಾ ಜೋಗಿಣಿ. ಆದಾಗ್ಯೂ ಹುಸೇನಪ್ಪ ಈಕೆಯನ್ನು ಮದುವೆಯಾಗಿ ಮುಂಬೈದಾಗೆ ಸಂಸಾರ ನಡೆಸುತ್ತಾಳೆ. ಹಳ್ಳಿಯವರ ಕಣ್ಣಿಗೆ ಈಕೆ ಮದುವೆಯಾಗಿ ಪತಿವರತೆ ಯಾಗಿರುವುದು ಮಹಾ ತಪ್ಪು. ಹಾಗಾಗಿ ಆಕೆ ಊರಿಗೆ ಬಂದಾಗ ಆಕೆಯನ್ನು ದಂಡಿಸಲು ಪ್ರಯತ್ನಿಸುತ್ತಾರೆ. ಮತ್ತೆ ಜೋಗಿಣೆಯಾಗಿಸಲು ಪ್ರಯತ್ನಿಸುತ್ತಾರೆ. ಇದ್ಯಾವುದಕ್ಕೂ ಜಗ್ಗದ ಆಕೆ ಊರಿನವರಿಗೆ ಉಗಿದು - ತಂದೆ, ತಾಯಿಯರನ್ನು ಆ ಊರಿನಿಂದ ಕರೆದುಕೊಂಡು ಹೋಗುವ ಆಶಯ ವ್ಯಕ್ತಪಡಿಸುತ್ತಾಳೆ. ಹೀಗೆ 'ಬದುಕು' ಕಾದಂಬರಿ ಜೋಗಿಣೆಯರ ಬದುಕಿನ ಅನೇಕ ಮಗ್ಗುಲನ್ನು ಬಿಚ್ಚಿಡುತ್ತಾ ಒಂದು ಸಾಂಸ್ಕೃತಿಕ ನೋಟವನ್ನು ನೀಡುತ್ತದೆ.

'ಬದುಕು' ಕಾದಂಬರಿಯ ಶಾಣಬಸೆವ್ವನ ತೇರು, ಮೊಹರಂ, ಚುಂಚೂರು ಮಾಪುರವ್ವ - ಇನ್ನು ಅನೇಕ ಹಬ್ಬ, ಜಾತ್ರೆಗಳೂ ಕೂಡಾ ಒಂದು ಸಾಂಸ್ಕೃತಿಕ ಅಧ್ಯಯನದ ನೋಟವನ್ನು ಒದಗಿಸುತ್ತವೆ. ಉತ್ತರ ಕರ್ನಾಟಕದ ಜನತೆ ಅದರಲ್ಲೂ ಕೆಳಸ್ತರದ ಮಂದಿಯಲ್ಲಿ ಇರುವ ಆಚರಣೆ ಭೂತ, ದೆವ್ವ ಇಂತಹ ಮೂಢ ನಂಬಿಕೆಗಳ ಬಗ್ಗೆ ಕೂಡಾ 'ಬದುಕು' ಕಾದಂಬರಿ ಬೆಳಕು ಚಲ್ಲುತ್ತದೆ. ಆಳು ಮಗ ಗುರಪ್ಪನಿಗೆ - ಒಕ್ಕಣ್ಣಿ ಕಿಷ್ಣಪ್ಪನ ಹೆಣ್ತಿಯ ದೆವ್ವ ಹಿಡಿಯುವುದು, ಮಲ್ಲವ್ವಂಗೆ ದೆವ್ವ ಹಿಡಿಯುವುದು, ಮುಕುಡಪ್ಪನ ದೆವ್ವ ಊಟ ಬೇಡುವುದು ಇತ್ಯಾದಿಗಳೂ ಕೂಡಾ ಈ ಜನರ ಬದುಕಿನ ಭಾಗಗಳಾಗಿಯೇ ಕಾಣಿಸುತ್ತವೆ.

ನವ್ಯದ ಸಂದರ್ಭದಲ್ಲಿ ಕುಡಿತ, ಕಾಮ, ಮಾಂಸದೂಟ ಇವು ಬ್ರಾಹ್ಮಣಿಕೆಯ ಸ್ತರವನ್ನು ಮುರಿಯುವ ಕ್ರಾಂತಿಕಾರಿ

ರೂಪಕಗಳಾಗಿ ಗೋಚರವಾಗಿದ್ದವು. ಆದರೆ 'ಬದುಕು' ಕಾದಂಬರಿಯ ಚಿತ್ರಣದಲ್ಲಿ ಇವು ಬದುಕಿನ ಭಾಗಗಳೇ ಆಗಿಬಿಡುತ್ತವೆ.

ಬಾಂಧವ್ಯದ ಬೆಸುಗೆ, ಗಂಡು-ಹೆಣ್ಣಿನ ತಾರತಮ್ಯವಿಲ್ಲದ ಬೆಸುಗೆ, ಜಾತಿ ಭೇದವಿಲ್ಲದ ಬೆಸುಗೆ - ಇವೆಲ್ಲ ಈ ಕಾದಂಬರಿಯಲ್ಲಿ ಕಂಡುಬರುವುದು ಕುಡಿತ ಹಾಗೂ ಮಾಂಸದೂಟದಲ್ಲಿ. ಇವೆರಡರ ಮೂಲಕ ಒಂದು ಸಾಮಾದಾಯಿಕ ಬದುಕಿನ ಕಲ್ಪನೆಯನ್ನು ಇಲ್ಲಿ ಕಾಣಬಹುದಾಗಿದೆ. ಮನೆಗೆ ಬಂದರೆ, ಹೋದರೆ ಒಟ್ಟಿಗೆ ತಿನ್ನುವ, ಒಟ್ಟಿಗೆ ಕುಡಿಯುವ, ಎಲ್ಲರನ್ನು ಚಿಗವ್ವ, ದೊಡ್ಡಪ್ಪ, ಆಯಿ, ಶಾಕ ಎನ್ನುವ ಸಂಬಂಧದ ಬದುಕು ಇಡೀ ಕಾದಂಬರಿಯ ಲವಲವಿಕೆಯನ್ನು ಕಾದಿಡುತ್ತಾ ಹೋಗುತ್ತದೆ. ಸಿಂದಿಯನ್ನು ಮನೆಯ ಹೆಂಗಸರು, ಮಕ್ಕಳಾದಿಯಾಗಿ ತಮ್ಮ ಬದುಕಿನ ಭಾಗವೆಂಬಂತೆ ಸ್ವೀಕರಿಸುತ್ತಾರೆ. ನೆಂಟರಿಷ್ಟರನ್ನು ಇದರ ಮೂಲಕವೇ ಆದರಿಸುತ್ತಾರೆ. ತಳವರ್ಗದ ಬದುಕಿನ ಸಾಂಸ್ಕೃತಿಕ ಅಧ್ಯಯನವಾಗಿ ಕೂಡಾ 'ಬದುಕು' ಕಾದಂಬರಿಯನ್ನು ಓದಬಹುದಾಗಿದೆ ಎಂದು ನಾನು ಹೇಳಿದ್ದು ಮೇಲಿನ ದೃಷ್ಟಿಯಿಂದಾಗಿಯೇ. ಹಾಗೆಂದ ಮಾತ್ರಕ್ಕೆ ಇವು 'ಟೋಕನ್'ಗಳಾಗಿ ಉಳಿದಿಲ್ಲ. ವೈಭವೀಕರಣಗೊಂಡಿಲ್ಲ. ಕುಡಿತದ ಹಿನ್ನಲೆಯಲ್ಲಿಯೇ ಕಲ್ಯಾಣಿ ಮುಕುಡಪ್ಪನನ್ನು ತಳ್ಳಿದಾಗ ಆತ ಸತ್ತು ಹೋಗುವುದು, ಕುಡಿತದ ಅಮಲಿನಲ್ಲಿಯೇ 8 ತಿಂಗಳ ಗರ್ಭಿಣಿ ಹೆಂಡತಿಯನ್ನು ಕುಡಕನೊಬ್ಬ ಕಾಮದಾಹ ತೀರಿಸಿಕೊಳ್ಳಲು ಎಳೆದು ಸಾಯಿಸುವುದು ಇಂತಹ ಕ್ರೌರ್ಯಗಳ ಮುಖಗಳನ್ನೂ ಕೂಡಾ 'ಬದುಕು' ಕಾದಂಬರಿ ಬಿಚ್ಚಿ ತೋರಿಸುತ್ತದೆ.

ಎಂ.ಕೆ. ಇಂದಿರಾವರ ಕತೆ - ಕಾದಂಬರಿಯಲ್ಲಿ ಬರುವ ತಿಂಡಿ-ತಿನಿಸುಗಳ ವರ್ಣನೆ ಒಂದು ರೀತಿಯ ಬಾಯಿ ಚಪಲ ಉಂಟು ಮಾಡಿದ್ದರೆ, ಗೀತಾ ನಾಗಭೂಷಣ್‌ರವರ ಖಂಡ, ತುಂಡು, ಶೇಂಗಾ ಹಿಂಡಿ ಇತ್ಯಾದಿಗಳು ಮತ್ತೊಂದು ರೀತಿಯ ಬಾಯಿ ಚಪಲ ಹುಟ್ಟ ಹಾಕುತ್ತವೆ.

ಈ ಕಾದಂಬರಿಯಲ್ಲಿ ಹಿಂದೂ-ಮುಸ್ಲಿಂರ ಬದುಕಿನ ನೇಯ್ಗೆ ಸಹಜವಾಗಿ ಮೂಡಿ ಬಂದಿದೆ. ನಿತ್ಯ ಜೀವನದಲ್ಲಿ ಇವರ ಸಂಪರ್ಕ, ವ್ಯವಹಾರಗಳು ಗಾಢವಾಗಿ ಹೆಣೆದುಕೊಂಡಿವೆ. ಸಿಂದಿಯ ಸಾಬ, ಫತರೂ, ನಜಮಾ ಇದಕ್ಕೆ ಉದಾಹರಣೆಗಳಾಗಿ ಸಿಕ್ಕುತ್ತಾರೆ.

ಶಿವಳ್ಳಿ ತರುಣರ ಮೋರಂ ಕುಣಿತ ಎಂದರೆ ಸಾಕು ಹರದಾರಿ ಬಾಳ ಪರಸಿದ್ಧಿ ಪಡೆದಿತ್ತು ಎನ್ನುವ ಲೇಖಕಿ 'ನಿಂಬಾಜಿ ಪೀರ' ದ ಕತೆಯ ಹಿಂದಿರುವ ತಾನಾಬಾಯಿ ಹಾಗೂ ಮಗ ನಿಂಬಾಜಿಯ ಕತೆಯನ್ನು ಸೊಗಸಾಗಿ ನಿರೂಪಿಸುತ್ತಾರೆ. ಪಂಜೆಗಳು ಮನೆಗೆ ಭೇಟಿ ಕೊಡುವುದು, ಖತಲ್ ಸಾಬ್, ನಿಂಬಾಜಿ ಪೀರ, ಹುಸೇನ್ ಸಾಬ್ ಪಂಜೆಗಳು ಎಲ್ಲರ ಮನೆಗೆ ಭೇಟಿ ಕೊಡುತ್ತವೆ.

ಖತಲ್‌ಸಾಬ್ ದೇವರು ಜಮಾದಾರ ಮಲ್ಲಪ್ಪನ ಮನಿ ಮುಂದೆ ನಿಂತುಕೊಂಡಾಗ ಜಮಾದಾರ ಮಲ್ಲಪ್ಪ ಹೇಳುತ್ತಾನೆ :

'ಏನ್ ಕಮ್ಮಿಯಾಗ್ಯಾದ ನಿನಗೆ ಹೇಳಪ್ಪ ಸಾಹೇಬಾ.... ನಿನಗೆ ದರಾ ವರ್ಸ ಕೂಡಾ ಹರಕೆಯೆಲ್ಲಾ ಕೊಟ್ಟೇನಲ್ಲ.... ಮತ್ತೇನ್‌ನಂದು ಹರಕಿ ಬಾಕಿಯಿಲ್ಲ. ಏನರ ನನ್ ಕಡಿಲಿಂದ ಚೂಕ್ ಆಗಿತ್ರಂದ ಹೇಳು.... ಮಾಡ್ತೀನಿ ನನ್ನಪ್ಪಾ..... ನೀ ಯಾಕೀಟು ತರಾಸು ಮಾಡ್ಕೋಲಕತ್ತಿದ್ದೀ ಸಾಹೇಬಾ ...."

ಹಿಂದೂಗಳಾದರೂ ಮಲ್ಲಪ್ಪ ಜಮಾದಾರಂಗೆ ಖತಲ್‌ಸಾಬ್ ದೇವರು ಅಂದರೆ ಅಪಾರ ನಂಬಿಕೆ-ವಿಶ್ವಾಸ. ದೇವರು ಹೀಗೆ ಹೇಳಿಬಿಟ್ಟಿತಲ್ಲ ಎಂಬ ಸಂಕಟ -ದುಮ್ಮಾನ. ಖತಲ್ ದೇವರು ಹೇಳುತ್ತದೆ.

"ಕಟ್ಟಿ ಕಲ್ಲು ಕಟ್ಟೀಗಿ ಕೂಡ್ಸಿದ್ದಿ ಖರೇ........ ಅದು ಗಟ್ಯಾಗಿ ಕೂಡಂಗ ಗಟ್ಯಾಗಿ ಬಿಗಿ ಮಾಡು.... ಉಚ್ಚಿ ಬಿದ್ದರ ಮಾತ ಘಾತಗ್ತದೋ ಬೇಟಾ ... ಕತ್ತಲ ಗವ್ಯಾಗ ನೀ ದಾರಿ ಹುಡಕ್ಕೋತ ತೆಳಗಿಳಿಬ್ಯಾಡೋ ಮಗಾ..... ತೆಳಗಿನ ಸುಳಿ ನಿನಗೆಳ್ಗಿಂಡೊಯ್ದತ್ತೋ ... ಹುಷಾರ್..."

ಈ ಭವಿಷ್ಯವಾಣಿ ಮಲ್ಲಪ್ಪ ಜಮಾದಾರದನ್ನು ಅಲುಗಾಡಿಸಿಬಿಡುತ್ತದೆ. ಇದು ಅಸ್ಪಷ್ಟ, ನಿಗೂಢವಾಗಿದ್ದರೂ ಕೂಡಾ ಇದರ ಅರ್ಥ, ಒಳಾರ್ಥಗಳಂತೆಯೇ ಕಾಕತಾಳೀಯವಾಗಿ ಮಲ್ಲಪ್ಪನ ಕುಟುಂಬದಲ್ಲಿ ಘಟನೆಗಳು ನಡೆಯುತ್ತವೆ.

ಹಿಂದೂ - ಮುಸ್ಲಿಂರ ಮಧ್ಯೆ ರಾಜಕೀಯವಾಗಿ ಒಂದು ಭಿನ್ನತೆ, ಕಂದರವನ್ನು ಉದ್ದೇಶಪೂರ್ವಕವಾಗಿ ತರುತ್ತಿರುವ ಇಂದಿನ ರಾಜಕೀಯ ಸನ್ನಿವೇಶದಲ್ಲಿ - 'ಬದುಕು' ಕಾದಂಬರಿ ಉತ್ತರ ಕರ್ನಾಟಕದ ಜೀವನದ ಒಳ ನೇಯ್ಗೆಯಲ್ಲಿ ಹೆಣೆದುಕೊಂಡಿರುವ ಹಿಂದೂ ಮುಸ್ಲಿಂ ರ ಬದುಕಿನ ಸೌಹಾರ್ದತೆಯನ್ನು ಬಿಚ್ಚಿ ಇಡುತ್ತದೆ.

'ಬದುಕು' ಕಾದಂಬರಿ ಇಂದಿನ 'ಅಭಿವೃದ್ಧಿ' 'ಪ್ರಗತಿ' ಯಂತಹ concept ಗೆ ಸವಾಲು ಹಾಕುವಂತಿದೆ. ಶಿಕ್ಷಣ, ಸೌಲಭ್ಯ, ನಗರೀಕರಣ, ರಸ್ತೆ, ಡ್ಯಾಂ ಮುಂತಾದವುಗಳ ಹೆಸರಿನಲ್ಲಿ ಒಂದು ಸ್ಥಳದಿಂದ ಒಂದು ಸಮುದಾಯವನ್ನು ಸ್ಥಳಾಂತರ ಮಾಡುವಾಗ ಅದರೊಳಗಿನ ಬದುಕಿನ ನೇಯ್ಗೆಗಳನ್ನು ಕಿತ್ತು ಹಾಕುವುದು,

ಅವಲಂಬಿತನ ಹುಟ್ಟು ಹಾಕುವುದು - ಹೀಗಾದಾಗ ಅಲ್ಲಿನ ಸಮುದಾಯದಲ್ಲಿ ಉಂಟಾಗುವ ಸಂಕಟಗಳನ್ನು ನಾವು ಊಹಿಸಬಹುದಾಗಿದೆ. 'ಬದುಕು' ಕಾದಂಬರಿ ಈ ರೀತಿಯ ಆಯಾಮಗಳನ್ನು ಕುರಿತು ಮಾತನಾಡದಿದ್ದಾಗ್ಯೂ ಸಹ 'ಬದುಕಿ'ನ ನೇಯ್ಗೆಯ ಹಿನ್ನಲೆಯಲ್ಲಿ ಇಂತಹ ಕಡೆ ಅಭಿವೃದ್ಧಿ ಕಲ್ಪನೆಗಳು ಎಂತಹ ದುರಂತ ಹುಟ್ಟು ಹಾಕಬಹುದು ಎಂಬ ಕಲ್ಪನೆಯನ್ನು ನಾವು ಮಾಡಬಹುದಾಗಿದೆ.

ಖಾಸಗೀಕರಣ, ಉದಾರೀಕರಣದ ಸಂದರ್ಭದಲ್ಲಿ ಕುಟುಂಬದ ನೆಲೆಗಳು ಚೂರು ಚೂರಾಗಿ ಒಡೆಯುತ್ತಿರುವ ಹಂತದಲ್ಲಿ 'ಬದುಕು' ಕಾದಂಬರಿಯ ಆಯಿ, ಅಕ್ಕ, ಕಾಕ, ಚಿಗಪ್ಪ, ದೊಡ್ಡಪ್ಪ - ಇಂತಹ ಸಂಬಂಧವಲ್ಲದ ಸಂಬಂಧಗಳು ಒಂದು extended family ಯ ಕಲ್ಪನೆಯನ್ನು ಹುಟ್ಟ ಹಾಕುತ್ತವೆ.

ಕಾದಂಬರಿ 'ಬದುಕು' ಕೆಳವರ್ಗದ ಹೆಣ್ಣು ಮಕ್ಕಳ ಬದುಕನ್ನು ವಿಶಿಷ್ಟವಾಗಿ ಬಿಚ್ಚಿ ಇಡುತ್ತದೆ. ಮೇಲ್ವರ್ಗದವರ sex symbols ಆಗಿ - ಕಾಣುವ ಈ ಹೆಣ್ಣು ಮಕ್ಕಳು ಇದನ್ನು ವಿರೋಧಿಸುವುದು ಕಂಡು ಬರುತ್ತದೆ. ಕಲ್ಯಾಣಿ ಜೈಲಿನಲ್ಲಿರುವಾಗ ಬೆಳ್ಳಿಯ ಜೊತೆ ಕೆಟ್ಟದ್ದಾಗಿ ನಡೆದುಕೊಳ್ಳುವ ಗೌಡನನ್ನು ಆಕೆ ತಿರಸ್ಕರಿಸುತ್ತಾಳೆ. ಅವನಿಗೆ ಅಸಮಾಧಾನ ಉಂಟಾಗುತ್ತದೆ. ಆಕೆಯನ್ನು ಒಲಿಸಿಕೊಳ್ಳಲು ಆತ ಬೆಳ್ಳಿಯ ಮನೆಗೆ ಜೋಗಿಣಿಯೊಬ್ಬಳನ್ನು ಕಳಿಸುತ್ತಾನೆ. ಆ ಜೋಗಿಣಿ ಬೆಳ್ಳಿಯಿಂದ ಅಪಮಾನಗೊಂಡು ಅಲ್ಲಿಂದ ಹೋಗುತ್ತಾಳೆ. ಅಂದರೆ ಜೋಗಿಣಿಯವರನ್ನು ಚಿತ್ರಿಸುವಾಗ ಕೂಡಾ ಗೀತಾರವರು ಕಪ್ಪು-ಬಿಳುಪಾಗಿ ಚಿತ್ರಿಸುವುದಿಲ್ಲ. ಇದೇ ಪರಿಧಿಯಲ್ಲಿ ಕಾಶಮ್ಮ-ಲಿಂಗರಾಜುವಿನ ಚಿತ್ರಣವಿದೆ. ಹಿರಿಯರು ಇವರಿಬ್ಬರನ್ನು ದೂರ ಮಾಡಿ ಮದುವೆ ಮಾಡಿ ಕಳಿಸಿದರೂ, ಮತ್ತೆ ಇವರಿಬ್ಬರೂ ಒಂದಾಗುತ್ತಾರೆ. ಕಾಶಮ್ಮ ಕುಟುಂಬ ಬಿಟ್ಟು ಬಂದು ಇವನೊಡನೆ ಎಲ್ಲರ ವಿರೋಧ ಎದುರಿಸಿಯೇ ಬದುಕುತ್ತಾಳೆ. ಕಾಶಮ್ಮನಿಂದಾಗಿ ಮನೆ ಮುರಿದು ಹೋಯಿತು ಎಂದು ಹಳ್ಳಿಯವರೆಲ್ಲ ಆಡಿಕೊಂಡರೂ, ಕಲ್ಯಾಣಿ ಜೈಲಿಗೆ ಹೋದಾಗ ಇದೇ ಕಾಶಮ್ಮ ಇಡೀ ಮನೆಗೆ ಬೆಂಬಲವಾಗಿ ನಿಲ್ಲುತ್ತಾಳೆ.

ಜೋಗಿಣಿಯರ ಬಗ್ಗೆ, ಕುಡಿತದ ಬಗ್ಗೆ, ಮೂಢನಂಬಿಕೆಗಳ ಬಗ್ಗೆ ಒಂದು ಟೀಕೆ, ವಿಮರ್ಶೆ ಪಾತ್ರಗಳ ಮೂಲಕ ಮೂಡಿ ಬಂದಿದ್ದರೂ, division of labour ಬಗ್ಗೆ ಮಾತ್ರ ಯಾವುದೇ ಅಸಹನೆ ಯಾವುದೇ ಸ್ತ್ರೀ ಪಾತ್ರದಲ್ಲೂ ಕಂಡು ಬರುವುದಿಲ್ಲ. ಗಂಡ ಕಲ್ಯಾಣಿ ಜೈಲಿಗೆ ಹೋದಾಗ ಕೊರಗರ ಈರವ್ವನ ಜೊತೆ ಹೋಗಿ ಸಿಂಧಿ ಪರಕೆ, ಫಳ್ಳಿಗಳನ್ನು ಕಡಿದು ಹೊರೆಕಟ್ಟಿಕೊಂಡು ಬುಟ್ಟಿ ಚಾಪೆ ಹೆಣೆಯುವ, ಹೊಲ, ಗದ್ದೆ ಕೆಲಸ ಮಾಡುವ ಬೆಳ್ಳಿಯಲ್ಲಿ ಕೂಡಾ ಮನೆಗೆಲಸದ ಒತ್ತಡ ಯಾವುದೇ ಅಸಹನೆ ಹುಟ್ಟು ಹಾಕುವುದಿಲ್ಲ. ಅನಿವಾರ್ಯದಲ್ಲಿ ಹೊರಗಿನ ದುಡಿಮೆಗೆ ತೆರೆದುಕೊಳ್ಳುವ ಈ ಹೆಣ್ಣು ಮಕ್ಕಳು ಅಡಿಗೆ, ಊಟ, ಬಡಿಸುವ ವಿಚಾರಗಳಲ್ಲಿ ಒಂದು ರೀತಿಯ ವಿಜೃಂಭಣೆ, ಸಂಭ್ರಮ ಕಾಣುತ್ತೇವೆ. ಈ ರೀತಿಯ ಇಬ್ಬಗೆಯ ಕೆಲಸ, ಒತ್ತಡಗಳು ಅವರಲ್ಲಿ ಯಾವುದೇ ರೀತಿಯ ಅಸಹನೆ ಹುಟ್ಟು ಹಾಕುವುದನ್ನು ನಾವು ಈ ಕಾದಂಬರಿಯಲ್ಲಿ ಕಾಣುವುದಿಲ್ಲ.

'ಬದುಕು' ಕಾದಂಬರಿ ನಾಲ್ಕು ತಲೆಮಾರಿನ ಕಥೆ. ಅಜ್ಜಿ, ಅಮ್ಮ, ಮೊಮ್ಮಗಳು, ಮರಿಮಗ ಇವರ ಸುತ್ತ ಕಥೆ ಸುತ್ತುತ್ತದೆ.

'ಬದುಕು' ಕಾದಂಬರಿಯ ಜನ ಸಂಬಂಧಗಳಲ್ಲಿ ಬದುಕುತ್ತಾರೆ. ಊಟ, ಕುಡಿತ, ಕಾಮ ಇವುಗಳ ಸಂಭ್ರಮದಲ್ಲಿ ಬದುಕುತ್ತಾರೆ. ಜಾತ್ರೆ, ದೇವರು, ದಿಂಡರು ಇದರ ನೇಯ್ಗೆಯ ಎಳೆಯಲ್ಲಿ ಬದುಕುತ್ತಾರೆ. ಸಂಬಂಧಗಳಿಲ್ಲದಿದ್ದರೂ ಸಂಬಂಧಗಳ ಜೊತೆ extended family ಯ ಕಲ್ಪನೆ ಹೆಣೆದುಕೊಂಡು ಬದುಕುತ್ತಾರೆ. ಇದು globalisation ನ ಈ ಯುಗದಲ್ಲಿ ಒಂದು ಪರ್ಯಾಯ ಸಾಂಸ್ಕೃತಿಕ ಕಥನ ಆಗಿ ಕೂಡಾ ಕಾಣಿಸಬಹುದಾಗಿದೆ.

ಬೆಂಗಳೂರಿನಲ್ಲಿ ಹಾಗೂ ಇತರ ಕಡೆಗಳಲ್ಲಿ ನಡೆಯುತ್ತಿರುವ ಅತ್ಯಾಚಾರದ ವರದಿಗಳನ್ನು ನೀವು ನಿತ್ಯ ಓದುತ್ತೀರಿ. ನಿಮಗೆ ಗೊತ್ತಿರುವ ಇಂತಹ ಘಟನೆಗಳನ್ನು ಮಾನಸಕ್ಕೆ ಬರೆಯಿರಿ. ಹಿಂಸೆಯ ಆಯಾಮಗಳನ್ನು ಗುರುತಿಸುವುದಕ್ಕೆ ಹಾಗೂ ವಿಶ್ಲೇಷಿಸುವುದಕ್ಕೆ ನಿಮ್ಮ ಸಹಕಾರ ಅಗತ್ಯ.

# ಮಹಿಳೆ - ನೈತಿಕತೆ ಮತ್ತು ಸಮಾನತೆ

ಭಾರತೀಯ ಸಮಾಜ ಎನ್ನುವಂಥದ್ದು ವಿಭಿನ್ನ ಜಾತಿ-ಧರ್ಮಗಳ ಹಿನ್ನೆಲೆಯಲ್ಲಿ ವೈವಿಧ್ಯಮಯವಾಗಿ ರೂಪುಗೊಂಡಿದೆ. ಅನೇಕ ಬಗೆಯ ವೈಚಾರಿಕ ನಿಲುವುಗಳನ್ನು, ವೈರುಧ್ಯಗಳನ್ನು ಜೊತೆಜೊತೆಗೇ ನಿರ್ವಹಿಸುತ್ತ ಬಂದ ಸಮಾಜವು ಅದರ ಏಳಿಗೆಯಲ್ಲಿ ಮಹಿಳೆಯರ ಮಾತ್ರವೂ ಇದೆ ಎನ್ನುವುದನ್ನು ಒಪ್ಪಿಕೊಂಡುದೇ ಇತ್ತೀಚೆಗೆ ಅಂದರೆ ಕಳೆದ ಶತಮಾನದಿಂದ ಈಚೆಗೆ. ಸ್ತ್ರೀ-ಪುರುಷ ಸಮಾನತೆಯ ಹೋರಾಟದಲ್ಲಿ ಬಹಳಷ್ಟು ಏಳು ಬೀಳುಗಳನ್ನು ಎದುರಿಸುತ್ತ ಬಂದ ಮಹಿಳೆ ಇದೀಗ ತನಗಾದ ಆಘಾತದಿಂದ ಚೇತರಿಸಿಕೊಳ್ಳುತ್ತಿದ್ದಾಳೆ. ಶ್ರುತಿಸಂಸ್ಕೃತಿಗೂ ಹಿಂದಿನ ಜಾನಪದ ಮೌಖಿಕ ಪರಂಪರೆಯ ಕೃಷಿ ಸಂಸ್ಕೃತಿಯ ಕಾಲದಿಂದಲೂ ಮನೆ-ಹೊಲಗಳೆರಡರಲ್ಲೂ ಶ್ರಮಮೂಲದ ಸ್ಥಾನವನ್ನು ಗಳಿಸಿದ್ದ ಆಕೆ ಆರ್ಥಿಕ ಸ್ವಾತಂತ್ರ್ಯಕ್ಕೆ ಅರ್ಹಳೆಂದು ನಮ್ಮ ಸಮಾಜ ಪರಿಗಣಿಸಿರಲಿಲ್ಲ. ಆಧುನಿಕತೆಯ ಪರಿಕಲ್ಪನೆ ಯಾವತ್ತು ಮಹಿಳಾಶಿಕ್ಷಣದ ದಾರಿಯನ್ನು ತೋರಿತೋ ಅಂದಿನಿಂದ ಅವಳು ಆರ್ಥಿಕಸ್ವಾತಂತ್ರ್ಯವನ್ನೂ ಪಡೆಯುವಂತಾಯಿತು. ಆ ಶಿಕ್ಷಣ ಅವಳಿಗೆ ಬೌದ್ಧಿಕ ಅರಿವಿನ ಜೊತೆಗೆ ಸಮಾನತೆಗಾಗಿ, ಸ್ವ-ವ್ಯಕ್ತಿತ್ವ ನಿರ್ಮಾಣ ಸ್ವಾತಂತ್ರ್ಯದ ಬಯಕೆಗೆ ಪ್ರೇರಣೆಯನ್ನೂ ನೀಡಿತು.

'ನೈತಿಕತೆ' ಎಂಬುದು ವಿಶಾಲ ಅರ್ಥವನ್ನು ಹೊಂದಿರುವ ಪದ. ನಾಗರಿಕವೆನಿಸಿಕೊಂಡ ಸಮಾಜದಲ್ಲಿ ಸಾಮಾನ್ಯವಾಗಿ ನಾವು ಯಾವುದನ್ನೆಲ್ಲ ನೀತಿಗೆ ಒಳಪಟ್ಟ ವಿಚಾರಗಳು ಎಂದು ತಿಳಿದು ಅದರಂತೆ ಬದುಕುತ್ತೇವೆಯೋ ಅವು ನೈತಿಕ ಮೌಲ್ಯಗಳು ಎಂದೆನಿಸಿಕೊಂಡಿವೆ. 'ನಾಗರಿಕ ಸಮಾಜ' ಎಂಬುದನ್ನು ಇಲ್ಲಿ ವಿಶೇಷವಾಗಿ ಉಲ್ಲೇಖಿಸಲಾಗಿದೆ ಏಕೆಂದರೆ, ಇಂದಿಗು ನಾಗರಿಕವಲ್ಲದ ಬುಡಕಟ್ಟುಗಳ ಸಮಾಜದಲ್ಲಿ ನಾಗರಿವೆನ್ನುವ ಸಮಾಜದ ' ಶೀಲಕ್ಕೆ' ಮಹತ್ವವೇ ಇಲ್ಲ. ದೈನಂದಿನ ಬದುಕಿನ ಉಳಿದೆಲ್ಲ ಸಂಗತಿಗಳಂತೆಯೇ ಅದೂ ಕೂಡ. ವಾಸ್ತವವಾಗಿ ಮಾನವ ಇತರ ಪ್ರಾಣಿಗಳಿಗಿಂತ ಭಿನ್ನನಾಗಿ ಮತ್ತು ಶಿಸ್ತುಬದ್ಧನಾಗಿ ಬದುಕಲು ಆತನ ದೈಹಿಕ ವಾಂಛೆಗಳಿಗೆ ಇಂತಹ ಕಟ್ಟುಪಾಡುಗಳು ನಿಜಕ್ಕೂ ಅತ್ಯಗತ್ಯ. ಈ ಬಗೆಯ ಕಟ್ಟುಪಾಡುಗಳು ಅತಿಯಾಗುತ್ತ ಅಸಮಾನತೆಯತ್ತ ಸಾಗಿದಂತೆಲ್ಲ ಅವುಗಳನ್ನು ನಿರಾಕರಿಸುವ ಪ್ರಯತ್ನಗಳು ನಡೆಯುತ್ತವೆ ಮತ್ತು ಇದು ರೋಗಗ್ರಸ್ಥ ಸಮಾಜದ ನಿರ್ಮಾಣಕ್ಕೆ ಕಾರಣವಾಗುತ್ತದೆ. ಒಂದು ಚೌಕಟ್ಟಿನೊಳಗಡೆ ರೂಪಿಸಿರುವ ನೈತಿಕವೆನಿಸಿಕೊಂಡ ಮೌಲ್ಯಗಳಿಗೆ ಅನುಗುಣವಾಗಿ ಬದುಕನ್ನು ರೂಪಿಸಿಕೊಂಡು ಅದರಂತೆ ನಡೆಯುವುದು ನೈತಿಕತೆ.

ಈ ನೈತಿಕತೆ ಎಂಬುದು ಮಾನವ ಬದುಕಿನ ರೀತಿಯನ್ನು ರೂಪಿಸುವ ರೂವಾರಿಯಾದರೆ, ಗಂಡು-ಹೆಣ್ಣಿನ ನಡುವಿನ ಅಂತರ/ಸಮಾನತೆಗಳು ಅವರವರ ಬದುಕಿನಲ್ಲಿ ಇರುವ ಅವಕಾಶವನ್ನು ಅಳೆಯುವ ಮಾನದಂಡಗಳಾಗಿವೆ. ಇವೆರಡೂ ಪರಸ್ಪರ ಒಂದನ್ನೊಂದು ಆಧರಿಸಿಕೊಂಡು ಮುನ್ನಡೆಯುತ್ತವೆ. ಎಲ್ಲಿ ಗಂಡು-ಹೆಣ್ಣಿನ ನಡುವೆ ನಿಜವಾದ ಸಮಾನತೆ ಇರುತ್ತದೋ ಅಲ್ಲಿ ಅವರಿಬ್ಬರ ನೈತಿಕತೆಯನ್ನೂ ಸಮಾನ ತಕ್ಕಡಿಯಲ್ಲಿ ತೂಗಲು ಸಾಧ್ಯವಾಗುತ್ತದೆ.

ಜಾಗತಿಕ ನೆಲೆಯಲ್ಲಿ ನೈತಿಕತೆಯು ಪುರುಷ-ಮಹಿಳೆ ಇಬ್ಬರಿಗೂ ಸಮಾನವಾದುದು ಹಾಗಾಗಿಯೇ ಬಿಲ್ ಕ್ಲಿಂಟನ್‌ನಂತಹ ವ್ಯಕ್ತಿ ಜಗತ್ತಿನ ಅತ್ಯುನ್ನತ ರಾಷ್ಟ್ರವಾಗಿರುವ ಅಮೇರಿಕದಂತಹ ದೇಶದ ಅಧಿಕಾರದ ಅತ್ಯುನ್ನತ ಸ್ಥಾನದುಲ್ಲಿದ್ದಾಗಲೂ ಮೋನಿಕಾ ಲೆವೆನ್ಸ್ಕಿ ಅವನ ವಿರುದ್ಧ ಲೈಂಗಿಕ ದೌರ್ಜನ್ಯದ ಆರೋಪ ಹೊರಿಸಿ, ಮೊಕದ್ದಮೆ ಹೂಡಿದ್ದು ಸುದ್ದಿಯಾಯಿತು, ಆತ ನ್ಯಾಯಾಲಯದ ಮೆಟ್ಟಿಲೇರುವಂತಾಯಿತು. ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಗಂಡು-ಹೆಣ್ಣಿನ ಭೇದದ ಪರಿಕಲ್ಪನೆ ಕೇವಲ ದೈಹಿಕವಾದದ್ದು. (ಆದರೆ ಈ ಭೇದವನ್ನುಪಯೋಗಿಸಿಕೊಂಡು ನಡೆಸುವ ದೌರ್ಜನ್ಯದ ಹಲವು ಮುಖಗಳು ಅಲ್ಲಿಯೂ ಇವೆ ಎನ್ನುವುದು ಇಲ್ಲಿ ಅಷ್ಟು ಮುಖ್ಯವಲ್ಲ). ಆದೆರ ಭಾರತೀಯ ಸಮಾಜದಲ್ಲಿ ಈ ಭೇದವು ಹೆಣ್ಣಿನಿಂದ ಅಪೇಕ್ಷಿಸುವ 'ಗುಣ'ಗಳ ಭೇದದಲ್ಲಿ. ನೀಡುವ 'ಅವಕಾಶ'ಗಳ ಅಂತರದಲ್ಲಿ, ಭವಿಷ್ಯದ 'ಅಪೇಕ್ಷೆ'ಗಳ ವಿಚಾರದಲ್ಲಿ ಭಿನ್ನವಾದುದು. ಪುರುಷಪ್ರಧಾನ ಸಮಾಜದ ಗಂಡು-ಪೌರುಷ ಪ್ರದರ್ಶನ, ಅಧಿಕಾರಗ್ರಾಹ್ಯ ವ್ಯಕ್ತಿತ್ವ-ದಂತಹ ಮೂಲಭೂತ 'ಗುಣ'ಗಳನ್ನೂ, ಹೆಣ್ಣು-ತ್ಯಾಗ, ಸಹನೆ, ಲಜ್ಜೆ, ಅನುಸರಣಾಶೀಲ 'ಗುಣ'ಗಳನ್ನು ಹೊಂದಿರಲೇಬೇಕೆಂಬ ಅಲಿಖಿತ ಶಾಸನದಂತೆ ನಮ್ಮ ಸಂಪ್ರದಾಯಶೀಲ ಸಮಾಜದ ಆವರಣವು ರೂಪುಗೊಂಡಿದೆ. 'ಅಪೇಕ್ಷೆ'ಯ ವಿಚಾರದಲ್ಲಿ ಪುರುಷ ಮಹತ್ವಾಕಾಂಕ್ಷಿಯಾಗಿರಬೇಕೆಂದು ಬಯಸುವ ಸಮಾಜ, ಮಹಿಳೆ ತನ್ನ 'ಪಾಲಿಗೆ ಬಂದದ್ದು ಪಂಚಾಮೃತ'ವೆಂಬಂತೆ ಸ್ವೀಕರಿಸಿ ತೃಪ್ತಿಪಡಬೇಕು ಎನ್ನುತ್ತದೆ.

ಭಾರತದ ಸಂದರ್ಭದಲ್ಲಿ ಮಹಿಳೆಯ ನೈತಿಕತೆಯ ಪರಿಕಲ್ಪನೆಯು ವಿಶೇಷ ಹಾಗೂ ವಿಚಿತ್ರವಾದುದು. ಇಲ್ಲಿ 'ನೈತಿಕತೆ' ಎಂಬುದು ಬಹ್ವಂಶ ಗಂಡು-ಹೆಣ್ಣಿನ ಸಂಬಂಧದ ನೆಲೆಯಲ್ಲಿ, ಮೂಲಭೂತವಾಗಿ ದೈಹಿಕ-ಮಾನಸಿಕ ಪರಿಶುದ್ಧತೆಯ ಹಾಗೂ

ವಾಸ್ತವದಲ್ಲಿ ಕೇವಲ 'ದೈಹಿಕ ಪಾವಿತ್ರ್ಯ'ದ ಹೆಣ್ಣಿನ ಶೀಲಮೂಲದ ಪರಿಕಲ್ಪನೆಗೆ ಸೇರಿದ್ದು ಎಂಬುದು ಎಲ್ಲರಿಗೂ ತಿಳಿದ ಸಂಗತಿ. 'ನೀತಿಗೆಟ್ಟವಳು' ಎಂಬಲ್ಲಿ ಓರ್ವ ಹೆಣ್ಣಿನ ಕುರಿತಾದ ಅವಹೇಳನವೇ ಮುಖ್ಯವಾದದ್ದು ಹೊರತು ಅದರಲ್ಲಿ ಪಾಲುದಾರನಾಗಿರಬಹುದಾದ ಗಂಡಿನ ಕುರಿತಲ್ಲ. ನೀತಿಯೆಂಬುದನ್ನು ಹೆಣ್ಣ ನಡೆ-ನುಡಿಗೆ ಮಾತ್ರ ಸೀಮಿತಗೊಳಿಸುವುದು ಪಿತೃಸತ್ತೆಯ ಒಂದು ಪ್ರಮುಖ ಲಕ್ಷಣ. ಬಲಾತ್ಕಾರವಾಗಿ ನಡೆದ ಶೀಲಹರಣದ ಸಂದರ್ಭದಲ್ಲಿಯೂ ಮಾನಸಿಕ, ದೈಹಿಕ ಆಘಾತಕ್ಕೊಳಗಾದ ಹೆಣ್ಣೇ ಪ್ರಶ್ನಾರ್ಹಳಾಗುವವಳು. ಅವಳ ನಡತೆಯಲ್ಲಿಯೇ ದೋಷ ಕಾಣುವ ನಮ್ಮ ಸಮಾಜದ ದೃಷ್ಟಿಯಲ್ಲಿ ಅವಳು ನೀತಿಗೆಟ್ಟವಳು. ಇಂತಹ ಮನೋಧರ್ಮ ಅವಳು ಹಾಗೂ ಅವಳ ಕುಟುಂಬಿಕರನ್ನು ನ್ಯಾಯ ಕೇಳಲೂ ಹಿಂಜರಿಯುವಂತೆ ಮಾಡಿದೆ.

ಇಂದಿನ ಬದಲಾಗುತ್ತಲೇ ಇರುವ ಸಾಮಾಜಿಕ, ಸಾಂಸ್ಕೃತಿಕ ಸನ್ನಿವೇಶಗಳ ನಡುವೆ ಪುರುಷ ಹಾಗೂ ಮಹಿಳೆಯರ ಸಂಬಂಧದ ಸಂದರ್ಭದಲ್ಲಿ ನೈತಿಕತೆಯ ಅರ್ಥಕ್ಕೆ ಅಕ್ಷರಶಃ ಅಜಗಜಾಂತರವಿದೆ. ವಿವಾಹದ ಬಳಿಕ ಪತಿಯೆಂಬ 'ಪುರುಷ'ನ ಜೊತೆ ಹೊಂದುವ ಸಂಬಂಧದ ಹಾಗೆಯೇ ಪತ್ನಿಯೆಂಬ 'ಮಹಿಳೆ'ಯ ಜೊತೆ ಹೊಂದುವ ಸಂಬಂಧದ ಮುಂದುವರಿಕೆಯ ಬಹುಮುಖ್ಯ ಭಾಗವಾದ ಕುಟುಂಬದ ಹೊಣೆಗಾರಿಕೆಯನ್ನು ನಿರ್ವಹಿಸುವ ಜವಾಬ್ದಾರಿ, ಕಾಳಜಿ ಒಂದೇ ಮಟ್ಟದ್ದಲ್ಲ. ಪುರುಷ 'ಮದುವೆಗೆ ಮೊದಲು ಹೊಂದಿದ್ದಿರಬಹುದಾದ ಸಂಬಂಧ'ವನ್ನು ಸಹಜವೆಂದು ಭಾವಿಸುವ, 'ಮದುವೆಯ ನಂತರದ ಸಂಬಂಧ'ದ ಕುರಿತು ಕುರುಡಾಗಿ ವರ್ತಿಸುವ ಸಮಾಜದ ಧೋರಣೆಯೇ ಸಂಪೂರ್ಣ ಪುರುಷಪಕ್ಷಪಾತಿಯಾದುದು. ಪತಿಯ ಈ ಬಗೆಯ ವರ್ತನೆಗೆ ಹೆಂಡತಿಯನ್ನೇ ಕಾರಣಮಾಡಿ ದೂಷಿಸುವ ನಮ್ಮ ಸಮಾಜ ಹೆಣ್ಣಿನ ಸಂದರ್ಭದಲ್ಲಿ ಮಾತ್ರ ಆಕೆಯನ್ನೇ ನಿಕೃಷ್ಟವಾಗಿ ನೋಡುತ್ತದೆ. 'ಅವನಿಗೇನು! ಅವನು ಗಂಡಸು, ಕೆಸರು ತುಳಿದರೆ ಕಾಲುತೊಳೆದುಕೊಳ್ಳುತ್ತಾನೆ' ಎಂಬ ಉಡಾಫೆಯ ಮಾತನ್ನಾಡುತ್ತದೆ. ಹೆಣ್ಣು ಅನಕ್ಷರಸ್ಥೆಯಾಗಿದ್ದು, ಆರ್ಥಿಕವಾಗಿ ಸಂಕಷ್ಟದ ಪರಿಸ್ಥಿತಿಯಲ್ಲಿದ್ದಾಗಲಂತೂ ಅವಳ ಮುಖದೆದುರೇ ಆಡಿಕೊಳ್ಳುವ ತನ್ನ ನೇರ ನಿಷ್ಠುರವಾದಿತನಕ್ಕೆ ತನ್ನ ಬೆನ್ನನ್ನು ತಾನೇ ತಟ್ಟಿಕೊಳ್ಳುತ್ತದೆ. ಗಂಡ ಕುಡುಕನಾಗಿ ತನ್ನ ಕುಟುಂಬಿಕರಿಗೆ ಭಾರವಾಗಿರಲಿ, ನಿಷ್ಪ್ರಯೋಜಕನಾಗಿರಲಿ, ಆತ ತನ್ನ ಪತ್ನಿಯ ಮೇಲೆ ಅಧಿಕಾರ ಚಲಾಯಿಸುವ ಅಭಿಲಾಷೆಗೆ ಹೊರತಾದವನಲ್ಲ. ಕುಟುಂಬ ನಿರ್ವಹಣೆಯ ಅಗತ್ಯದ, ಅನಿವಾರ್ಯ ಸಂದರ್ಭಗಳಲ್ಲಿ ಹೆಣ್ಣು ಮನೆಯಿಂದ ಹೊರಹೋಗಿ ಪುರುಷರ ಜೊತೆ ಕೆಲಸಮಾಡಬೇಕಾಗಿ ಬಂದಾಗ ಸಂಶಯದ ಕಣ್ಣುಗಳಿಂದ ನೋಡುವ, ಹಿಂಸಿಸುವ ಗಂಡಂದಿರಿಗೇನೂ ನಮ್ಮಲ್ಲಿ ಕೊರತೆಯಿಲ್ಲ. ಎಷ್ಟೋ ಕಡೆಗಳಲ್ಲಿ ಸಮಾಜದಲ್ಲಿ ಸುಶಿಕ್ಷಿತರೆನ್ನಿಸಿಕೊಂಡ ಗಂಡಸರೂ ಕೂಡ ತಮ್ಮ ಮಡದಿಯರನ್ನು, ಮಹಿಳೆಯರನ್ನು ಅಗೌರವದಿಂದ ನೋಡುವ, ಹಿಂಸಿಸುವ ಪ್ರಸಂಗಗಳೂ ಆಗಾಗ ನಮ್ಮ ಸುತ್ತಮುತ್ತಲಲ್ಲಿ, ಮಾಧ್ಯಮಗಳಲ್ಲಿ ನಮ್ಮ ಗಮನಕ್ಕೆ ಬರುತ್ತವೆ. ಇಂತಹ ಮನೋಧರ್ಮದ ಮಹಿಳೆಯರೂ ನಮ್ಮ ನಡುವೆ ಬಹಳಷ್ಟು ಮಂದಿಯಿದ್ದಾರೆ. ಸಮಾಜದಲ್ಲಿ ತನ್ನ ದೌರ್ಬಲ್ಯವನ್ನು ಮುಚ್ಚಿಕೊಳ್ಳಲು ಪುರುಷ ಮಾಡುವ ಹೆಣ್ಣಿನ ಶೋಷಣೆಗೆ ಇಂಥವರಿಂದ ಬೆಂಬಲ ಸಿಗುತ್ತದೆ. ಹೀಗೆ ನೈತಿಕತೆಯ ವಿಚಾರದಲ್ಲಿ ತಾರತಮ್ಯ ಧೋರಣೆಗೆ ನಮ್ಮ ಸಮಾಜವು ಜೋತುಬೀಳುವ ವಿಪರ್ಯಾಸಕ್ಕೆ ಬಹಳ ಮಂದಿ ಮಹಿಳೆಯರೂ ಕಾರಣರಾಗಿದ್ದಾರೆ.

'ಸಮಾಜ' ಎನ್ನುವುದು ಹಲವು ಕುಟುಂಬಗಳಿಂದಾದುದು. ಭಾರತದ ಸಮಾಜವು ಈ ಕೌಟುಂಬಿಕ ವ್ಯವಸ್ಥೆಯೊಳಗಡೆ ರೂಪುಗೊಂಡದ್ದು. 'ಕುಟುಂಬ' ಎನ್ನುವಂಥದ್ದು ಒಂದು ಬಗೆಯ ಸಂಕೀರ್ಣ ಪರಿಸರ. ಅಲ್ಲಿ ವಿಭಿನ್ನ ಮನೋಧರ್ಮದ ಸದಸ್ಯರಿರುತ್ತಾರೆ. ಅವರೆಲ್ಲರ ಇಷ್ಟಾನಿಷ್ಟಗಳನ್ನು ಅರಿತು ನಡೆದುಕೊಂಡು ಎಲ್ಲಿಯೂ ಕಲಹ ಬಾರದಂತೆ ತನ್ನ ಕರ್ತವ್ಯವನ್ನು ನಿರ್ವಹಿಸಬೇಕಾದುದು ಹೆಣ್ಣಿನ ಜವಾಬ್ದಾರಿ. ಈ ಕುಟುಂಬದಲ್ಲಿ ಪುರುಷ ಮುಖ್ಯನಾಗಿರುವಂತೆಯೇ ಮಹಿಳೆಯೂ ಒಬ್ಬ ವ್ಯಕ್ತಿಯಾಗಿ ಮುಖ್ಯಳು ಎಂಬುದನ್ನು ಇಂದಿಗೂ ನಮ್ಮ ಜನ ಒಪ್ಪಲು ತಯಾರಿಲ್ಲ. ವೇದಗಳ ಕಾಲದಿಂದಲೂ ವಿವಾಹ ಸಂದರ್ಭದಲ್ಲಿ ಹೆಣ್ಣಿನಲ್ಲಿ ರೂಪ, ಕಾರ್ಯಕ್ಷಮತೆ, ಬುದ್ಧಿವಂತಿಕೆ ಮೊದಲಾದ ಸರ್ವಗುಣಗಳುನ್ನು ಗಂಡಿನಲ್ಲಿ ಕೇವಲ ಬುದ್ಧಿವಂತಿಕೆಯನ್ನು ಮಾತ್ರ ಅರ್ಹತೆಯ ಮಾನದಂಡವನ್ನಾಗಿ ಅಪೇಕ್ಷಿಸಲಾಗಿದೆ. ಅದಕ್ಕೂ ಹಿಂದೆ ಹೆಣ್ಣನ್ನು ಕನ್ಯಾಶುಲ್ಕ ಅಥವಾ ತೆರ ಕೊಟ್ಟು ವಿವಾಹಮಾಡಿಕೊಳ್ಳುವ ಪದ್ಧತಿ ಇದ್ದುದು ಚರಿತ್ರೆಯಲ್ಲಿ ದಾಖಲಾದುದನ್ನು ಗುರುತಿಸಲಾಗಿದೆಯಾದರೂ ಹಣಕೊಟ್ಟು ಬಿಟ್ಟಿಯಾಗಿ ದುಡಿಯಲು ಆಳೊಬ್ಬಳನ್ನು ಖರೀದಿಸುವ ಹುನ್ನಾರ ಅಂದಿನ ಕೃಷಿಕ ಸಮಾಜದ ಪುರುಷಶಾಹೀ ಆಲೋಚನೆಯಲ್ಲಿದೆ. ಇಂದಿಗೂ ಕೂಡ ಆರ್ಥಿಕ ಸ್ವಾವಲಂಬನೆಗಾಗಿಯೋ, ಕುಟುಂಬದ ನಿರ್ವಹಣೆಗೆ ಸಹಾಯವಾಗಲಿ ಎಂದೋ ಹೊರಗೆ ದುಡಿಯುವ ಮಹಿಳೆ ಮನೆಯ ಜವಾಬ್ದಾರಿಯನ್ನೂ ಅಷ್ಟೇ

ಸಮರ್ಥವಾಗಿ ನಿರ್ವಹಿಸಬೇಕಿದೆ. ಗೃಹಕೃತ್ಯದ ಕೆಲಸಗಳು ಕೆಲಸವೇ ಅಲ್ಲ ಮತ್ತು ಆ ಕೆಲಸಗಳು ಯಾವುದೇ ಸಂದರ್ಭದಲ್ಲೂ ಕೇವಲ ಹೆಣ್ಣಿನದು ಎಂಬಲ್ಲಿಗೆ ನಮ್ಮ ಸಮಾಜದ ಆಲೋಚನಾಸರಣಿ ನಿಂತುಬಿಟ್ಟಿದೆ ಎನ್ನಬಹುದೇನೋ ! ಆಧುನಿಕತೆ ಹಾಗೂ ಸಂಪ್ರದಾಯಿಕತೆಯ ಮಿಶ್ರಣದ ಈ ಸಂದರ್ಭಕ್ಕೆ ಎಷ್ಟರಮಟ್ಟಿಗೆ ಆಕೆ ಕೂಡ ಒಗ್ಗಿಹೋಗಿದ್ದಾಳೆಂದರೆ ಗೃಹಕೃತ್ಯದ ಕೆಲಸವನ್ನು ಒಂದುದಿನದವಟ್ಟಿಗೆ ಪತಿಗೆ ವರ್ಗಾಯಿಸಿದಾಗಲೂ ಮಾನಸಿಕವಾಗಿ ಆಕೆ ಅದರಿಂದ ಮುಕ್ತಳಾಗಿರುವುದಿಲ್ಲ. ಅಷ್ಟರಮಟ್ಟಿಗೆ ಆಕೆಯ ಮಾನಸಿಕಸ್ತರದಲ್ಲಿ ಗೃಹಕೃತ್ಯಗಳೆಲ್ಲ ಆಕೆಯದೇ ಜವಾಬ್ದಾರಿ ಎಂಬುದನ್ನು ಮತ್ತೆ ಮತ್ತೆ ಸ್ಥಾಪಿಸಿ ಅಚ್ಚೊತ್ತಲಾಗಿದೆ.

ಇಂತಹ ಸಮಾಜದಲ್ಲಿ ಅವಕಾಶಗಳು ಪುರುಷನಿಗೇ ಹೆಚ್ಚು. ರಾಜಕೀಯ, ಉದ್ಯೋಗ ಅಥವಾ ಇನ್ನಾವುದೇ ಕ್ಷೇತ್ರದಲ್ಲೂ ಮಹಿಳೆ ತನ್ನ ಅವಕಾಶವನ್ನು ಹೋರಾಡಿ ಪಡೆಯಬೇಕಾದ ಪರಿಸ್ಥಿತಿ. ಒಂದೊಮ್ಮೆ ಪಡೆದರೂ ಅದರಲ್ಲಿ ಪುರುಷನ ನಿರಂತರ ಹಸ್ತಕ್ಷೇಪದಿಂದಾಗಿ ಆಕೆಯ ಅಸ್ತಿತ್ವಕ್ಕೆ, ಸ್ವಾಭಿಮಾನಕ್ಕೆ ಏಟು ಸಾಮಾನ್ಯ ಎನ್ನಿಸಿಬಿಟ್ಟಿದೆ. ಗ್ರಾಮ ಪಂಚಾಯತ್‌ಗಳಂತಹ ಆಡಳಿತಾಂಗಗಳಲ್ಲಿ ಕೆಳಮಧ್ಯಮ ಮತ್ತು ಮಧ್ಯಮ ವರ್ಗದ ಮಹಿಳೆಯರ ಪ್ರವೇಶ ಆಡಳಿತರಂಗದಲ್ಲಿ ಸಾಮಾನ್ಯ ಮಹಿಳೆಗೂ ಸ್ಥಾನವನ್ನು ತಂದುಕೊಟ್ಟಿದೆಯಾದರೂ ಅಲ್ಲಿಯೂ ಆಕೆಗೆ ಪತಿಯ ಅಥವಾ ಇತರ ಪುರುಷರ ಹಸ್ತಕ್ಷೇಪ, ಕಿರುಕುಳ ತಪ್ಪಿದ್ದಲ್ಲ. ಸಮಾಜದಲ್ಲಿ ಈವರೆಗೆ ಹೆಣ್ಣು ಪ್ರವೇಶಿಸದ ಕ್ಷೇತ್ರಗಳಿಗೆ ಅವಳ ಪ್ರವೇಶವನ್ನು ಆಕೆಗೆ ತಾವು ಈತನಕ ನಿರಾಕರಿಸಿದ ಹಕ್ಕೆದು ಭಾವಿಸದೆ, ಪುಕ್ಕಟೆಯಾಗಿ ತಾವು ಆಕೆಗೆ ನೀಡಿದ ಅವಕಾಶ ಎಂಬುದಾಗಿ ತಿಳಿದಿರುವುದೇ ಇದಕ್ಕೆ ಕಾರಣ. ಹಾಗಾಗಿ ಇಂತಹ ಕಡೆಗಳಲ್ಲಿ ಆಕೆಗೆ ಪ್ರೋತ್ಸಾಹವೇ ಸಿಗುವುದಿಲ್ಲ. ಇಂಥಲ್ಲೆಲ್ಲ ಜವಾಬ್ದಾರಿಯಿಂದ ಕಳಚಿಕೊಂಡು ಪಲಾಯನ ಹೂಡುವ ಇಲ್ಲವೇ ನಿಷ್ಪ್ರಯೋಜಕರಾಗಿ ಕೇವಲ ಹೆಂಡಂದಿರ ಮೇಲೆ ಅಧಿಕಾರ ಚಲಾಯಿಸುವುದಷ್ಟೇ ತಮ್ಮ ಜೀವನದ ಏಕಮಾತ್ರ ಉದ್ದೇಶ ಎಂದು ತಿಳಿದಿರುವ ಗಂಡಂದಿರಿರುತ್ತಾರೆ. ಹೆಣ್ಣು ಜೀವನನಿರ್ವಹಣೆಯ ಜೊತೆಗೆ ತಾನು ಈಗಷ್ಟೇ ಕಾಲಿಟ್ಟ ಆಡಳಿತಕ್ಷೇತ್ರದಲ್ಲಿ ತನ್ನೆದುರಿಗಿರುವ ಸವಾಲನ್ನೂ ಎದುರಿಸುವ ಛಾತಿಯನ್ನು ಬೆಳೆಸಿಕೊಳ್ಳಬೇಕಾಗಿದೆ.

ನಮ್ಮ ಪಾರಂಪರಿಕವಾದ ಪ್ರಾಚೀನ ಸಮಾಜವು ಸ್ತ್ರೀಗೆ ಶಿಕ್ಷಣವನ್ನು ನಿರಾಕರಿಸಿತ್ತು. ಮುಂದೆ ಆಧುನಿಕ ಶಿಕ್ಷಣ ಕ್ರಮದಿಂದ ಪ್ರಗತಿಪರರಾದ ಅನೇಕ ಮಂದಿಯ ಕಾರಣದಿಂದಾಗಿ ಮಹಿಳೆ ವಿದ್ಯಾಭ್ಯಾಸ ಪಡೆದು ಎಚ್ಚರಗೊಳ್ಳುವಂತಾಯಿತು. ಮೊದಲು ಕೇವಲ ಬ್ರಾಹ್ಮಣ ವರ್ಗದ, ರಾಜಮನೆತನಗಳ ಮಹಿಳೆಯರಿಗೆ ಮಾತ್ರವಾಗಿದ್ದ ಶಿಕ್ಷಣ ಮುಂದೆ ಇತರವರ್ಗದ ಮಹಿಳೆಯರಿಗೂ ದೊರಕುವಂತಾಯಿತು. ಭಾರತೀಯ ಸಮಾಜವು ವಿಭಿನ್ನ ರಂಗಗಳಲ್ಲಿ ಎಷ್ಟೇ ಪ್ರಗತಿಯನ್ನು ಸಾಧಿಸಿದರೂ, ಅದು ಒಳಗೊಂಡಿರುವ ಹಲವು ಪೂರ್ವಾಗ್ರಹಗಳು ಗಂಡು-ಹೆಣ್ಣಿನ ನಡುವಿನ ಅಂತರವನ್ನು ಅಳಿಸಿ, ಸಮಾನತೆಯನ್ನು ಸಾಧಿಸುವಲ್ಲಿ ಯಶಸ್ವಿಯಾಗಿಲ್ಲ. ಹಾಗಾಗಿಯೇ ಹೆಣ್ಣು ತನ್ನ ಪ್ರತಿಭೆ, ಪ್ರಯತ್ನಗಳಿಂದ ಉನ್ನತಿಗೇರಿದರೆ, ಅದನ್ನು ಮೇಲ್ನೋಟಕ್ಕೆ ಸ್ವಾಗತಿಸುವಂತೆ ಕಾಣಿಸುವ ಮಂದಿ ಆ ಬಗ್ಗೆ ತಮಗಿರುವ ಅಸಮಾಧಾನವನ್ನು ಹೊರತೋರದೆ ಬೂದಿಮುಚ್ಚಿದ ಕೆಂಡದಂತಿರುತ್ತಾರೆ. ಆಕೆಯ ಕಾಲೆಳೆಯಲು ಸಿಗುವ ಸಂದರ್ಭವನ್ನು ಕಾಯುತ್ತಾರೆ. ಎಷ್ಟೋ ಕುಟುಂಬಗಳಲ್ಲಿ ಹೆಂಡತಿ ತನಗಿಂತ ಹೆಚ್ಚಿನ ವಿದ್ಯಾವಂತೆಯಾಗಿರಬಾರದು, ಒಂದೊಮ್ಮೆ ಉದ್ಯೋಗದಲ್ಲಿದ್ದರೆ ತನಗಿಂತ ಹೆಚ್ಚಿನ ಪದೋನ್ನತಿ ಹೊಂದಿರಬಾರದು ಎಂಬೆಲ್ಲ ಸಂಕುಚಿತ ಮನಸ್ಸಿನ ಗಂಡಂದಿರಿರುವುದನ್ನು ಇಂದಿಗೂ ನಾವು ಕಾಣಬಹುದು. ಇಂತಹ ಕೌಟುಂಬಿಕ ಪರಿಸರ ಹೆಣ್ಣಿಗೆ ಕುಟುಂಬ ಅಥವಾ ಉದ್ಯೋಗ ಇವುಗಳಲ್ಲಿ ಒಂದನ್ನು ಮಾತ್ರ ಆಯ್ಕೆ ಮಾಡಿಕೊಳ್ಳಬೇಕಾದ ಅಸಹನೀಯ ವಾತಾವರಣವನ್ನು ತಂದಿಡುವುದರ ಜೊತೆಗೆ ಅವಳು ದಿಟ್ಟಳಾಗಿದ್ದರೆ ಆ ಪರಿಸ್ಥಿತಿಯನ್ನು ವಿರೋಧಿಸುವಂತೆ ಇಲ್ಲವೇ ದುರ್ಬಲ ಮನಸ್ಸಿನವಳಾದರೆ ಅದರಿಂದ ಹಿಮ್ಮೆಟ್ಟುವಂತೆ ಮಾಡಿಬಿಡುತ್ತದೆ. ವಿರೋಧಿಸುವ ಪ್ರತಿಕ್ರಿಯೆ ಕೆಲವೊಮ್ಮೆ ಅವಳನ್ನು ಕುಟುಂಬದಿಂದ ಹೊರಗಿಡಲೂಬಹುದು ಮತ್ತು ಹಿಮ್ಮೆಟ್ಟುವ ಪ್ರತಿಕ್ರಿಯೆ ಕೇವಲ ಕುಟುಂಬದಲ್ಲಿ ಅವಳ ಅಸ್ತಿತ್ವವನ್ನು ಉಳಿಸಿ ಉಳಿದೆಡೆ ಅವಳನ್ನು ಇಲ್ಲವಾಗಿಸಬಹುದು.

ವೇದಗಳ ಕಾಲದಿಂದಲೂ 'ಸ್ತ್ರೀ ಪೂಜಾರ್ಹಳು' ಎಂದು ಕೇವಲ ನುಡಿಯಲ್ಲಿ ಹೇಳುತ್ತ, ನಡೆಯಲ್ಲಿ ಅದಕ್ಕೆ ವಿರುದ್ಧವಾಗಿ ವರ್ತಿಸುತ್ತ ಹೋದದ್ದು ವಾಸ್ತವ. ಅಕ್ಷರಜಾಗೃತಿ ಆಕೆಯಲ್ಲಿ ಮೂಡಿದರೆ ತಮ್ಮ ಸ್ಥಾನಕ್ಕೆ ಕುಂದುಂಟಾಗಬಹುದೆಂಬ ಭಯದಿಂದ ಅವಳನ್ನು ಅನಕ್ಷರತೆಯ ಕತ್ತಲಲ್ಲಿಡಲಾಯಿತು. ಉದ್ದಕ್ಕೂ ಕೇವಲ ಮೈತ್ರೇಯಿ, ಗಾರ್ಗಿಯರಂತಹ ಮೇಲ್ವರ್ಗದ ಮಹಿಳೆಯ ವೇದಾಧ್ಯಯನ ಮಾಡಿದವರಾಗಿದ್ದರು ಎನ್ನುವ ಮೂಲಕ ಸಮಾಧಾನಿಸಲು ಪ್ರಯತ್ನಿಸಿ, ಸಾಮಾನ್ಯ ಸ್ತ್ರೀಯರಿಗೆ ಶಿಕ್ಷಣ ನಿರಾಕರಿಸಿದ್ದನ್ನು ಮುಚ್ಚಿಹಾಕಲು ಪ್ರಯತ್ನಿಸಲಾಯಿತು. ಶಿಕ್ಷಣದಿಂದ ವಂಚಿತಳಾದ ಸ್ತ್ರೀ ಬಾಲ್ಯದಿಂದ ವೃದ್ಧಾಪ್ಯದವರೆಗೂ, ಪಿತ, ಪತಿ, ಪುತ್ರರ ಆಶ್ರಯದಲ್ಲಿರಬೇಕಾದ ಅನಿವಾರ್ಯತೆಗೆ ನೂಕಿತು.

'ರಾಮಾಯಣ'ದಲ್ಲಿ ಸೀತೆ ರಾಜಕುಮಾರಿಯಾದರೂ ಹೆಣ್ಣಿನಲ್ಲಿ ಪುರುಷ ಬಯಸುವ ಮೂಲಭೂತ ಗುಣಗಳ ಪ್ರತಿನಿಧಿಯಾಗಿ, ಅವುಗಳ ರಕ್ಷಣೆಗಾಗಿ ತನ್ನ ಬದುಕಿನುದ್ದಕ್ಕೂ ಹೋರಾಡಿ ಚಿರಕಷ್ಟಗಳಿಗೆ ಈಡಾಗಿ 'ಆದರ್ಶನಾರಿ' ಎನ್ನಿಸಿಕೊಂಡು 'ಪಂಚಮಹಾಪತಿವ್ರತೆಯರ'ಲ್ಲಿ ಒಬ್ಬಳಾಗಿ ಅಲೌಕಿಕಳಾದಳು. 'ಮಹಾಭಾರತ'ದ ದ್ರೌಪದಿ ಪಂಚಪಾಂಡವರ ಮಡದಿ. ಬಹುಪತ್ನಿತ್ವಕ್ಕೆ ಪ್ರತಿಯಾಗಿ ಬಹುಪತಿತ್ವಕ್ಕೆ ಸಂದರ್ಭ ಕಲ್ಪಿಸಿದೊಡನೆ ಸಮಾನತೆ ಪ್ರಾಪ್ತವಾಗಿದೆಯೆಂದು ಭಾವಿಸಬೇಕಾಗಿಲ್ಲ. ಯಾಕೆಂದರೆ ಇಲ್ಲಿ ಅರ್ಜುನ ಗೆದ್ದುತಂದ 'ವಸ್ತು'ವನ್ನು ಸಹೋದರರು ಹಂಚಿಕೊಳ್ಳುವಂತೆ ತಾಯಿ ಕುಂತಿ ನೋಡದೆಯೇ ನೀಡುವ ಆದೇಶ ಇದಕ್ಕೆ ಕಾರಣ ಎಂಬುದನ್ನು ನಾವು ಗಮನಿಸುವುದಿಲ್ಲ. ಆ ಸಂದರ್ಭದಲ್ಲಿ ದ್ರೌಪದಿಯ ಮನಸ್ಥಿತಿ ಹೇಗಿತ್ತು ? ಎಂಬುದು ನಮಗೆ ಮುಖ್ಯವಾಗುವುದಿಲ್ಲ. ಎರಡು ವಿಭಿನ್ನ ಕಾಲಘಟ್ಟದ ಆಳುವ ವರ್ಗಕ್ಕೆ ಸೇರಿದ ಮಹಿಳೆಯರ ಪ್ರತಿನಿಧಿಗಳಾಗಿ ಕಾಣಿಸಿಕೊಳ್ಳುವ ಇವರಿಬ್ಬರು ಆಯಾ ಕಾಲಘಟ್ಟದ ಆಳುವ ವರ್ಗಧ ಇತರ ಮಹಿಳೆಯರ ಪರಿಸ್ಥಿತಿಗೆ ನಿದರ್ಶನರು. ಮೇಲ್ವರ್ಗದ ಮಹಿಳೆಯರ ಸ್ಥಿತಿಯೇ ಹೀಗಿದ್ದರೆ ಅಂದಿನ ಸಾಮಾನ್ಯ ಮಹಿಳೆಯರ ಪಾಡು ಹೇಗಿದ್ದಿರಬಹುದು ? ಯೋಚಿಸಿ.

ಇತ್ತೀಚೆಗೆ ದೈನಿಕವೊಂದರಲ್ಲಿ ಔದ್ಯೋಗಿಕ ವಲಯದಲ್ಲಿ ಪುರುಷರಿಗೆ ಮಾತ್ರ ಸೀಮಿತವಾಗಿದ್ದ ಬಸ್ಸು-ಲಾರಿ-ರೈಲುಗಳ ಚಾಲಕಿಯರಾಗಿ, ನಿರ್ವಾಹಕಿಯರಾಗಿ, ಆರಕ್ಷಕರಾಗಿ ಪ್ರವೇಶ ಪಡೆಯುತ್ತಿರುವ ಮಹಿಳೆಯರ ಸಮೀಕ್ಷೆಯೊಂದು ಪ್ರಕಟವಾಗಿತ್ತು. ಇಲ್ಲಿನ ವಿಷಾದದ ಸಂಗತಿಯೆಂದರೆ ಬಸ್ಸುಗಳಲ್ಲಿ ನಿರ್ವಾಹಕಿಯಾಗಿ ಕೆಲಸ ಮಾಡುತ್ತಿರುವ ಅವಿವಾಹಿತ ಹೆಣ್ಣುಮಗಳೋರ್ವಳು ತಾನು ಗಂಡಸರ ನಡುವೆ ಓಡಾಡಿ ಕೆಲಸ ಮಾಡುವ ಕಾರಣವನ್ನೊಡ್ಡಿ ಗಂಡಿನವರು ವಿವಾಹ ನಿರಾಕರಿಸಿದ್ದನ್ನು ಹೇಳಿಕೊಂಡಿದ್ದಾಳೆ, ಜೊತೆಗೆ ಆಕೆ ತನಗೆ ವಿವಾಹ ಅಗತ್ಯದ್ದು ಅಂತನ್ನಿಸುವುದಿಲ್ಲ ಎಂದು ಹೇಳಿರುವುದು ಹೆಣ್ಣಿಗೆ ವಿವಾಹವೇ ಬದುಕಿನ ಪರಮಧ್ಯೇಯವಾಗಬಾರದು ಎಂಬ ಇಂದಿನ ಮಹಿಳೆಯ ವೈಚಾರಿಕ ಜಾಗೃತಿಕ ನಿದರ್ಶನವಾಗಿದೆ.

ಅಕ್ಷರಜಾಗೃತಿ ಇಂದು ನಮ್ಮಲ್ಲಿ ಇಂತಹ ಸಂದರ್ಭಗಳನ್ನು ಬೆಂಬಲಿಸುವ, ಮೆಚ್ಚಿಕೊಳ್ಳುವ ಮನೋಧರ್ಮವನ್ನು ಹುಟ್ಟುಹಾಕಿದೆ. ಹಾಗಾಗಿಯೇ ಎಲ್ಲೋ ಒಂದೆಡೆ ವರದಕ್ಷಿಣೆಗಾಗಿ ಪೀಡಿಸುವ ಗಂಡನ್ನು ಹಸೆಮಣೆಯಲ್ಲೇ ನಿರಾಕರಿಸುವ ಧೈರ್ಯತೋರುವ ಹೆಣ್ಣುಮಗಳಂತಹವರು, ಇನ್ನೊಂದೆಡೆ ಆ್ಯಸಿಡ್ ಎರಚಿಸಿಕೊಂಡು ಬದುಕಿನಲ್ಲಿ ನಿರಾಶರಾಗಿ ಆತ್ಮಹತ್ಯೆಗೆ ಮುಂದಾಗದೆ ಬದುಕನ್ನು ಎದುರಿಸುವ ಕೆಚ್ಚುತೋರುವ ಹಸೀನಾ, ತಾರಾರಂತಹ ಹೆಣ್ಣುಮಕ್ಕಳು ನಮ್ಮ ಪ್ರೀತಿಗೆ-ಮೆಚ್ಚುಗೆಗೆ ಪಾತ್ರರಾಗುತ್ತಾರೆ.

ಕೇವಲ ಗಂಡಸರಂತೆ ಉಡುಪುತೊಟ್ಟ ಮಾತ್ರಕ್ಕೆ ಗಂಡಸರಂತೆ ವ್ಯವಹರಿಸಿದ ಮಾತ್ರಕ್ಕೆ ಸಮಾನತೆ ಬಾರದು. ವಿವಾಹಬಾಹಿರ ಸಂಬಂಧದಂತಹ ಸಂದರ್ಭಗಳು ಮಹಿಳೆಯ ಹಣಗಳಿಸುವ ಅವಕಾಶಬಾಕತನದ ಹಾದಿಯೇ ? ಬದುಕಿನ ಅನಿವಾರ್ಯತೆಯೇ? ಅಥವಾ ಬಲಾತ್ಕಾರದ ಹಾದಿಯೇ ? ಎಂಬ ಎಲ್ಲ ವಿಷಯಗಳ ಕುರಿತ ವಿಮರ್ಶೆಯ ಮೂಲಕ ಅವಳನ್ನು ನೋಡುವ ಸಮಾಜದ ದೃಷ್ಟಿಕೋನ ಬದಲಾಗಬೇಕು. ಒಳ್ಳೆಯ ಬಾಳುವೆಗೆ ಸಹಕಾರ ನೀಡುವ ಮೂಲಕ ಮಾನವೀಯತೆಯನ್ನೊಳಗೊಂಡ ಸಮಾನತೆಯನ್ನು ನೀಡಿದಂತೆಯೇ ಸರಿ.

**ಡಾ.ಶೈಲಾ.ಯು**
ಪ್ರಾಜೆಕ್ಟ್ ಅಸೋಸಿಯೇಟ್
ಯು.ಜಿ.ಸಿ ರಿಸರ್ಚ್ ಪ್ರಾಜೆಕ್ಟ್
ಕನ್ನಡ ವಿಭಾಗ
ಮಂಗಳೂರು ವಿಶ್ವವಿದ್ಯಾನಿಲಯ
ಮಂಗಳಗಂಗೋತ್ರಿ - 574199
ದೂರವಾಣಿ : 0824 - 2287913

# ಹಂಪಿ ಮಹಿಳಾ ವಿಶ್ವವಿದ್ಯಾನಿಲಯದ ಒಂದು ಸಂಭ್ರಮದ ದಿನ

ಮಾರ್ಚ್ 24, 2005 ರಂದು ಹಂಪಿ ವಿಶ್ವವಿದಾಯನಿಲಯದ ಮಹಿಳಾ ಆಧ್ಯಯನ ವಿಭಾಗ 'ಕರ್ನಾಟಕ ರಾಜ್ಯ ಮಹಿಳಾ ಅಧ್ಯಯನ ವೇದಿಕೆ' ಯೊಂದನ್ನು ರೂಪಿಸುವ ಹಿನ್ನಲೆಯಲ್ಲಿ ಮಹತ್ವವಾದ ಸಭೆಯೊಂದನ್ನು ನಡೆಸಿತು. ಕುಲಪತಿಗಳಾದ ಪ್ರೊ ವಿವೇಕ್‌ರೈ ರವರ ಪ್ರೋತ್ಸಾಹ - ಉತ್ಸಾಹ ಎರೆಡನ್ನೂ ಒಳಗೊಂಡ ಈ ಯೋಜನೆಯನ್ನು ಕಾರ್ಯರೂಪಕ್ಕೆ ತರುವ ಮೊದಲ ಹಂತವಾಗಿ ಮಾರ್ಚ್ 24 ರ ಸಭೆಯನ್ನು ಕರೆಯಲಾಗಿತ್ತು. ಅಧ್ಯಯನ ಶೀಲರು ವಿವಿಧ ಆಧ್ಯಯನ ವಿಭಾಗದಿಂದ ಪ್ರತಿನಿಧಿಗಳಾಗಿ ಬೆಂಗಳೂರು, ಮೈಸೂರು, ಮಂಗಳೂರು, ಗುಲ್ಬರ್ಗ, ರಾಯಚೂರು ಹಾಗೂ ಮತ್ತಿತರ ವಿಭಾಗಗಳಿಂದ ಮಹಿಳಾ ಚಳುವಳಿಯ ಸಂಘುಟನೆಯ ಪ್ರತಿನಿಧಿಗಳೂ ಕೂಡಾ ಈ ಸಭೆಯಲ್ಲಿ ಭಾಗವಹಿಸಿದ್ದರು. ಈ ಸಮಾರಂಭದ ಅಧ್ಯಕ್ಷರಾಗಿ ಶ್ರೀಮತಿ ಲೀಲಾವತಿ ಆರ್. ಪ್ರಸಾದ್ ಭಾಗವಹಿಸಿದ್ದರು. ವಿಶೇಷ ಅತಿಥಿಗಳಾಗಿ ವಿಜಯಮ್ಮ, ರಾಮೇಶ್ವರಿ ವರ್ಮರವರೂ ಕೂಡಾ ಉಪಸ್ಥಿತರಿದ್ದರು, ಇದೇ ಸಂದರ್ಭದಲ್ಲಿ ಶ್ರೀಮತಿ ಗೀತಾ ನಾಗಭೂಷಣ್ ರವರನ್ನು ಸಾರಾ ಅಬೂಬಕರ್ ರವರು ವಿಶ್ವವಿದ್ಯಾನಿಲಯದ ಪರವಾಗಿ ಸನ್ಮಾನಿಸಲು ಆಹ್ವಾನಿತರಾಗಿದ್ದರು.

ಮಹಿಳಾ ದಿನಾಚರಣೆ, ಗೀತಾ ನಾಗಭೂಷಣ್‌ರವರ ಸನ್ಮಾನ ಹಾಗೂ 'ಕರ್ನಾಟಕ ರಾಜ್ಯ ಮಹಿಳಾ ಆಧ್ಯಯನ ವೇದಿಕೆ'ಯ ಆರಂಭ ಈ ಮೂರೂ ಸಭೆಗಳನ್ನೊಳಗೊಂಡ ಒಂದು ದಿನದ ಸಮಾರಂಭದಲ್ಲಿ ಶ್ರೀಮತಿಯವರು ಆಶಯ ಭಾಷಣ ಮಾಡಿದರು. ಚಳುವಳಿ ಹಾಗೂ ಸೈದ್ಧಾಂತಿಕ ಕಲ್ಪನೆಗಳ ಮೂರ್ತರೂಪಕ್ಕೆ ಸಂಪರ್ಕ ಸೇತುವೆ ಯಾಗುವುದು ತಮ್ಮ ಉದ್ದೇಶವಾಗಿದೆ ಎಂದರು. ಗೀತಾ ನಾಗಭೂಷಣ್ ರವರು ಕೇಂದ್ರ ಸಾಹಿತ್ಯ ಅಕ್ಯಾಡಮಿ ಪ್ರಶಸ್ತಿ ಪಡೆದುಕೊಂಡುದಲ್ಲದೇ 'ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಆಯ್ಕೆಯಾದ ಸಂತೋಷವನ್ನು ಎಲ್ಲರೊಡನೆ ಹಂಚಿಕೊಳ್ಳುವುದು ತಮ್ಮ ಆಶಯವಾಗಿದೆ ಎಂದರು. ಸಾರಾ ಅಬೂಬಕರ್‌ರವರಿಂದ ಗೀತಾ ರವರಿಗೆ ಸನ್ಮಾನಿಸುವ ಮಹತ್ವವನ್ನು ಕೂಡಾ ಮಾತನಾಡಿದರು.

ಉದ್ಘಾಟನಾ ಭಾಷಣ ಮಾಡಿದ ಶ್ರೀಮತಿ ವಿಜಯರವರು ಚಳುವಳಿ ಹಾಗೂ ಸೈದ್ಧಾಂತಿಕತೆಯ ಸಂಬಂಧಗಳನ್ನು ಕುರಿತು ಮಾತನಾಡಿದರು. ಲಜ್ಜಾ ಗೌರಿ ಯ ಕಲ್ಪನೆಯಲ್ಲಿಯೇ ನಮ್ಮ ಸಮಾಜ ಹೆಣ್ಣಿನ ಚಹರೆಯನ್ನು ಗಮನಿಸುತ್ತದೆ. ಮಾತೃತ್ವ, ಹೆಣ್ಣಿನ ದೇಹದ ವಿಜೃಂಭಣೆಯೇ ಇಂದಿಗೂ ನಡೆಯುತ್ತಿದೆ ಎಂದರು. 'ಕುವೆಂಪು ಕ್ಷಮೆ ಕೋರಿ' ಎಂದು ಕಲಾವಿದೆ ಸುರೇಖಾರವರು ಶ್ರೀ ರಾಮಾಯಣ ದರ್ಶನಂನಿಂದ ಅಗ್ನಿ ಪ್ರವೇಶದ ಅಧ್ಯಾಯದ ಅಭಿವ್ಯಕ್ತಿಗೆ ಸೀರೆಯ ಅಂಚಿನ ಚಿತ್ರದಲ್ಲಿ ಅಭಿವ್ಯಕ್ತಿಗೊಳಿಸಿದ್ದು, ನೀವು ಕಂಡ ರಾಮುನನ್ನು ನಾನು ಎಲ್ಲೂ ಕಂಡಿಲ್ಲ ಎಂದು ಕುವೆಂಪುರವರಿಗೆ ಹೇಳುತ್ತಾರೆ. ಹೆಣ್ಣನ್ನು ನೋಡುವ ದೃಷ್ಟಿಕೋನದಲ್ಲಿ ಬದಲಾವಣೆ ಚಾರಿತ್ರಿಕ, ಸಾಂಸ್ಕೃತಿಕ ಹಾಗೂ ರಾಜಕೀಯ ಮುಖ್ಯವಾಹಿನಿಯಲ್ಲಿ ನಡೆಯಬೇಕು ಎಂದು ವಿಜಯಾರವರು ಅಭಿಪ್ರಾಯಪಟ್ಟರು. ಅಗತ್ಯಬಿದ್ದಾಗ ಸಂವಿಧಾನದ ತಿದ್ದುಪಡಿ ಕೂಡಾ ಆಗಬೇಕು ಎಂದರು. ಚಳುವಳಿಯ ಉದ್ದೇಶ, ಗುರಿಗಳನ್ನು ನಾವು ಸ್ಪಷ್ಟವಾಗಿಸಿಕೊಳ್ಳಬೇಕು. ಇಲ್ಲದಿದ್ದರೆ ಅನೇಕ ಸಂಘುಟನೆಗಳ ಉದ್ದೇಶ, ಗುರಿಗಳೇ ಅರ್ಥವಾಗದೇ ಚಳುವಳಿಯ ದಿಕ್ಕನ್ನೇ ಬದಲಿಸಬಹುದು. ಈ ಬಗ್ಗೆ ಜಾಗ್ರತರಾಗಿರುವುದು ಅಗತ್ಯ ಎಂದು ಶ್ರೀಮತಿ ವಿಜಯಾರವರು ನುಡಿದರು.

ಸಾರಾ ಅಬುಬಕರ್ ಗೀತಾ ನಾಗಭೂಷಣ್‌ರವರನ್ನು ಸನ್ಮಾನಿಸಿ ಮಾತನಾಡುತ್ತಾ ಕನ್ನಡ ಸಾಹಿತ್ಯ ಅಕ್ಯಾಡಮಿ ಆಧ್ಯಕ್ಷರಾಗಿ ಆಯ್ಕೆ ಗೊಂಡ ಹಾಗೂ ಕೇಂದ್ರ ಸಾಹಿತ್ಯ ಅಕ್ಯಾಡಮಿ ಪ್ರಶಸ್ತಿ ಪಡೆದ ಗೀತಾರವರನ್ನು ಅಭಿನಂದಿಸಿದರು. ಇವರು ತಮ್ಮ ಸಾಹಿತ್ಯದಲ್ಲಿ ಅನಾಥ ಹೆಣ್ಣು-ಮಕ್ಕಳ ಮೇಲಾಗುವ ದೌರ್ಜನ್ಯವನ್ನು ಚಿತ್ರಿಸಿದ್ದಾರೆ ಎಂದರು. 'ಬದುಕು' ಉತ್ತರ ಕರ್ನಾಟಕದ ಸತ್ವಯುತವಾದ ಭಾಷೆಯಲ್ಲಿ ನೈಜ ಭಾರತವನ್ನು ಹಿಂದುಳಿದವರ ನೋವು ನಲಿವುಗಳನ್ನು ಚಿತ್ರಿಸುತ್ತದೆ ಎಂದರು. ಹಾಗೆಯೇ ತಲಾಖ್ ಬಗ್ಗೆ, ಬಹುಪತ್ನಿತ್ವದ ಬಗ್ಗೆ ಶೀಲದ ಕಲ್ಪನೆ ಬದಲಾಗಬೇಕಾದ ಅಗತ್ಯದ ಕುರಿತು ಮಾತನಾಡಿದರು.

ಸನ್ಮಾನಿತರಾದ ಗೀತಾ ನಾಗಭೂಷಣ್ ತಮಗೆ ಸಂದ ಗೌರವ, ಪ್ರಶಸ್ತಿ ಎಲ್ಲ ಲೇಖಕಿಯರಿಗೂ ಸಲ್ಲುತ್ತದೆ ಎಂದು ಹೇಳುತ್ತ ಕೆಳವರ್ಗದ ಮಹಿಳೆಯ ಶೋಷಣೆಯ ರೂಪ ಹಾಗೂ ಪೂರ್ಣವಿಕಾಸದ ಬಗ್ಗೆ ಮಾತನಾಡಿದರು. ದೇವದಾಸೀ ಪದ್ಧತಿ ಹಾಗೂ ಹೆಣ್ಣು ಭ್ರೂಣ ಹತ್ಯೆಯ ಕ್ರೌರ್ಯದ ಬಗ್ಗೆ ಮಾತನಾಡಿದರು.

'ರಾಮರಾಜ್ಯ' ದ ಕಲ್ಪನೆ ಹಾಗೂ 'ಪಾಂಡವರ ರಾಜ್ಯ' ರ ಕಲ್ಪನೆಗಳ ವೈಪರೀತ್ಯ, ವಿಡಂಬನೆ ಕುರಿತು ಹೇಳಿದರು. ಒಳ ಮೀಸಲಾತಿ ಇಲ್ಲದಿದ್ದರೆ ಮೀಸಲಾತಿಯಿಂದ ಯಾರು ಅನುಕೂಲ ಪಡೆಯುತ್ತಾರೆ ಎಂದು ಪ್ರಶ್ನಿಸಿದರು. ಒಳ ಮೀಸಲಾತಿ ಸಮರ್ಥಿಸಿದ ಗೀತಾರವರು ಪುರುಷ ಪ್ರಧಾನ ವ್ಯವಸ್ಥೆಯನ್ನು ಮುರಿದು ಕಟ್ಟುವ ಅಗತ್ಯವಿದೆ ಎಂದರು ಸಾಹಿತ್ಯ ಅಕ್ಯಾಡಮಿಯ ಅಧ್ಯಕ್ಷ ಪದವಿಯ ಸವಾಲನ್ನು ಎದುರಿಸುವ ತಾವು ದಲಿತರ,ಮಹಿಳೆಯರ, ಹೆಂಗಸರ, ಅನಕ್ಷರಸ್ಥರ ಪರವಾಗಿ ಕೆಲಸ ಮಾಡುತ್ತೇನೆ ಎಂದು ಭರವಸೆ ಇತ್ತರು ಜೊತೆಗೆ ಕೇಂದ್ರ ಸಾಹಿತ್ಯ ಅಕ್ಯಾಡಮಿ ಪದವಿ ಯಾರ ಸೊತ್ತು ಅಲ್ಲ ಎನ್ನುವ ಆತ್ಮವಿಶ್ವಾಸ ಇಂದು ಮೂಡಿ ಬಂದಿದೆ ಎಂದರು.

ಕುಲಪತಿಗಳಾದ ಶ್ರೀಯುತ ಪ್ರೊ. ವಿವೇಕ್ ರೈ ಯವರು ಮಾತನಾಡಿ ನಾವು ಕೇಂದ್ರ ಬಿಂದುವಾಗಿರೋಲ್ಲ, ಅಂಚಿನಲ್ಲಿರುತ್ತೇವೆ ಎಂದರು. ಕೇಂದ್ರದಲ್ಲಿ ಕೂತಿದ್ದರೂ ಮೌನವಾಗಿರುತ್ತೇವೆ ಎಂದರು. 1988 ರಲ್ಲಿ ಸಾರಾ ಅಬೂಬಕರ್ ಮೇಲೆ ಪುತ್ತೂರಿನಲ್ಲಿ ನಡೆದ ಹಲ್ಲೆಯನ್ನು ಜ್ಞಾಪಿಸಿಕೊಂಡರು. ಜಾಗತಿಕ ನೆಲೆಯಲ್ಲಿ ಆಂದೋಲನಗಳು ನಡೆಯುತ್ತಿವೆ. ಸ್ಥಳೀಯ ನೆಲೆಯಲ್ಲಿನ ಮಹಿಳಾ ಸಮಸ್ಯೆಗಳ ಜೊತೆ, ಮಹಿಳಾ ಆಂದೋಲನಗಳ ಜೊತೆ ವಿಶ್ವವಿದ್ಯಾನಿಲಯ ಮುಖಾಮುಖಿಯಾಗಬೇಕು. U.G.C ಹಾಗೂ ಸರಕಾರಕ್ಕೆ ಇವು ಸವಾಲುಗಳಾಗುತ್ತದೆ. ಏಕೆಂದರೆ ಅನುದಾನದ ರೂಪದಲ್ಲಿನ ಪ್ಯಾಕೇಜ್‌ಗಳ ಮೂಲಕ ಸರ್ಕಾರ Co - option ಮಾಡಲು ಪ್ರಯತ್ನಿಸುತ್ತಿರುತ್ತದೆ. ಇದರ ಬಗ್ಗೆ ಅರಿವು ಇರಬೇಕು ಹೆದರಿಕೆ, ಭಯದಿಂದಲೇ ನಾವು ಇವುಗಳನು ಸೂಕ್ಷ್ಮವಾಗಿ ಗಮನಿಸಬೇಕಾಗುತ್ತದೆ. ಸೂಕ್ಷ್ಮ ಕಣ್ಣು, ಮನಸ್ಸು ಬೆಳೆಯಬೇಕು. ಪುರುಷ ವರ್ಗ ಪಶ್ಚಾತ್ತಾಪ ಪಡುವ ಅರಿವಿನ ಪಲ್ಲಟಕ್ಕಾಗಿ ಮಹಿಳಾ ಚಟುವಟಿಕೆಗಳಲ್ಲಿ ಭಾಗವಹಿಸಬೇಕು ಎಂದು ಪ್ರೊ.ವಿವೇಕ್ ರೈಯವರು ಕರೆಯಿತ್ತರು. ಪ್ರಾರಂಭವಾಗುತ್ತಿರುವ ಅಧ್ಯಯನ ವೇದಿಕೆಗೆ ಪೂರ್ವ ನಿರ್ಧರಿತ ಸಂವಿಧಾನ ಇಲ್ಲ. ಇಲ್ಲಿ ಚರ್ಚೆ, ಅನುಭವ ಹಂಚಿಕೆಯಿಂದ ಇದರ ರೂಪ-ರೇಷೆಗಳು ಮೂಡಬೇಕು ಎಂದರು.

ಮಧ್ಯಾಹ್ನದ ಅನೌಪಚಾರಿಕ ಸಭೆಯಲ್ಲಿ ' ಕರ್ನಾಟಕ ರಾಜ್ಯ ಮಹಿಳಾ ಅಧ್ಯಯನ ವೇದಿಕೆ' ಯ ಬಗ್ಗೆ - ಅದರ ರೂಪ ರೇಷೆಯ ಬಗ್ಗೆ ಚರ್ಚೆ ನಡೆದು ಈ ಕೆಳಕಂಡ ಅಂಶಗಳ ಮೇಲೆ ಬೆಳಕು ಚೆಲ್ಲಲಾಯಿತು.

1. ಈ ವೇದಿಕೆಯಲ್ಲಿ ಭಾಗವಹಿಸುವ ಸಂಘಟನೆಗಳ ಉದ್ದೇಶ, ಗುರಿಗಳು ಸ್ಪಷ್ಟವಾಗಬೇಕು.
2. ಏಳು ವಿಶ್ವವಿದ್ಯಾನಿಲಯಗಳೂ ಇದರಲ್ಲಿ ಸದಸ್ಯರಾಗಬೇಕು.
3. ಈ ವೇದಿಕೆಗೆ ಒಂದು ಕೋರ್ ಗ್ರೂಪ್ ಇದ್ದು ಅವರು Co - ordination ಮಾಡಬೇಕು.
4. ಎಲ್ಲಾ ಸಂಘಟನೆ, ವಿಶ್ವವಿದ್ಯಾನಿಲಯಗಳ ಪ್ರತಿನಿಧಿಗಳ ಕರೆದು ಸದಸ್ಯತ್ವ, ಗುರಿ, ಉದ್ದೇಶಗಳ ಬಗ್ಗೆ ಮತ್ತೊಮ್ಮೆ ಸುಧೀರ್ಘವಾಗಿ ಚರ್ಚೆ ನಡೆಸಬೇಕು.
5. ಸಂಘಟನೆಯ ರೂಪ-ರೇಷೆಯ ಬಗ್ಗೆ ಅಲ್ಲಿ ನೆರೆದಿರುವವರು. ತಮ್ಮ ಅಭಿಪ್ರಾಯಗಳನ್ನು ಮುವಾಗಿ ಬರೆದು ಕಳಿಸಬೇಕು.
6. ಅನುದಾನದ ಬಗ್ಗೆ ಒಂದು ಸ್ಪಷ್ಟ ನಿಲುವು ಕೂಡಾ ಅಗತ್ಯ. Co-option ಹಿನ್ನೆಲೆಯಲ್ಲಿ - ಅನುದಾನ ಪಡೆದು ಕೊಳ್ಳುವ ಸಂಘಟನೆಗಳ ಬಗ್ಗೆ ಒಂದು ವಿಮರ್ಶಾತ್ಮಕ ನೋಟ ಅಗತ್ಯ.

ಹೀಗೆ ಹಲವಾರು ಅಭಿಪ್ರಾಯಗಳು ಚರ್ಚೆಯಲ್ಲಿ ಮೂಡಿ ಬಂದವು. ಜೊತೆಗೆ ವಿಶ್ವವಿದ್ಯಾನಿಲಯದಂತಹ ವ್ಯವಸ್ಥೆಯ ಅಡಿ ಇಂತಹ ಒಂದು ಸ್ವಾಯತ್ತ ಸಂಘಟನೆ ಅದರ ಎಲ್ಲಾ ಕನಸುಗಳನ್ನು ಸಾಕಾರಗೊಳಿಸಿಕೊಳ್ಳುವುದು ಸಾಧ್ಯವೇ ? ಎಂಬುದರ ಬಗ್ಗೆ ಕೂಡಾ ಗಂಭೀರವಾದ ಚಿಂತನೆ ನಡೆಸಬೇಕಾಗಿದೆ. ಚಳುವಳಿಗಳು ಪ್ರಭುತ್ವ, ರಾಜ್ಯ, ಶ್ರೇಣೀಕೃತ ವ್ಯವಸ್ಥೆ, ಅನುದಾನ ಇವುಗಳ ಮಿತಿಗಳ ಬಗ್ಗೆ, Co - option ಬಗ್ಗೆ ಆಗಾಗ್ಗೆ ಪ್ರಶ್ನೆಗಳನ್ನು ಎತ್ತತ್ತಲೇ ಇರುತ್ತಾರೆ. ಹೋರಾಟ ನಡೆಸುತ್ತಿರುತ್ತಾರೆ ಹಾಗಾಗಿ ಸ್ವಾಯತ್ತತೆ ಕಲ್ಪನೆ-ವಿಶ್ವವಿದ್ಯಾನಿಲಯಗಳ ಅಡಿಯಲ್ಲಿ ಸಾಕಾರಗೊಳ್ಳುವ ಸಾಧ್ಯತೆ - ಮಿತಿಯ ಬಗ್ಗೆ ಮತ್ತೊಮ್ಮೆ ಚರ್ಚೆ ನಡೆದು ನಿರ್ಧಾರಗಳು ಮೂಡಿ ಬಂದರೆ ಒಳಿತು.

**ಹೆಚ್.ಎಸ್.ಸಿ.**

# ಮಹಿಳಾ ಅಧ್ಯಯನಕ್ಕೊಂದು ಶೈಕ್ಷಣಿಕ ಕೈಪಿಡಿ

'ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು'
ಲೇ : ಡಾ.ಎಂ.ಉಷಾ
ಪುಟ : 204, ಬೆಲೆ : ರೂ 100
ಪ್ರ : ಪ್ರಸಾರಾಂಗ, ಕ.ವಿ.ವಿ., ಹಂಪಿ

ಕರ್ನಾಟಕದ ಶಿಕ್ಷಣ ವ್ಯವಸ್ಥೆಯಲ್ಲಿ 'ಮಹಿಳಾ ಅಧ್ಯಯನ' ಆರಂಭವಾಗಿ ಹಲವಾರು ವರ್ಷಗಳೇ ಆಗಿವೆ. ಪ್ರತ್ಯೇಕ ಮಹಿಳಾ ವಿಶ್ವವಿದ್ಯಾನಿಲಯವೂ ಸ್ಥಾಪನೆಯಾಗಿದೆ. ಆದರೂ ಕನ್ನಡದಲ್ಲಿ ಶೈಕ್ಷಣಿಕ ಅಗತ್ಯವನ್ನು ಗಯನದಲ್ಲಿಟ್ಟುಕೊಂಡು ಮಹಿಳಾ ಅಧ್ಯಯನಕ್ಕೆ ಸಂಬಂಧಿಸಿದಂತೆ ಸಿಗುವ ಕೃತಿಗಳು ತೀರಾ ಕಡಿಮೆ. ಈ ಕೊರತೆಯನ್ನು ತುಂಬುವ ಪ್ರಯತ್ನವೇ ಡಾ॥ಎಂ.ಉಷಾ ಅವರ ಕೃತೀ' ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು' 'ಮಹಿಳಾ ಅಧ್ಯಯನ' ಎಂಬ ಹೆಸರಿನಲ್ಲಿ ನಿಯತಕಾಲಿಕೆಯನ್ನು ಹೊರತರುತ್ತಿರುವ ಹಂಪಿಯ ಕನ್ನಡ ವಿಶ್ವ ವಿದ್ಯಾನಿಲಯ ಈ ಕೃತಿಯನ್ನು ಪ್ರಕಟಿಸಿದೆ.

'ಶೈಕ್ಷಣಿಕ ಅಗತ್ಯವನ್ನು ಗಮನದಲ್ಲಿಟ್ಟುಕೊಂಡು ರಚಿಸಲಾಗಿರುವ ಈ ಕೃತಿ ಮೂಲತಃ ಮಾಹಿತಿ ಪ್ರಧಾನವಾದುದು' ಎಂದು ಆರಂಭದಲ್ಲಿ ಲೇಖಕಿ ಅರಿಕೆ ಮಾಡಿಕೊಂಡಿದ್ದಾರೆ. ಅಂಥ ಮಾಹಿತಿಯನ್ನು ಕ್ರಮಬದ್ಧಗೊಳಿಸುವಾಗ ಇದುವರೆಗೆ ಬಳಸಲಾಗುತ್ತಿದ್ದ ಚಾರಿತ್ರಿಕ ಕಾಲಾನುಕ್ರಮಣಿಕೆಯ ಮಾದರಿಗಿಂತ ಭಿನ್ನವಾಗಿ ಮಹಿಳಾ ವಿಷಯಾಧಾರಿತ ಕ್ರಮವನ್ನು ಅನುಸರಿಸಿರುವುದು ಈ ಪುಸ್ತಕದ ವಿಶೇಷ.

ಇದುವರೆಗಿನ ಮಹಿಳಾ ಅಧ್ಯಯನಕ್ಕೆ ಸಂಬಂಧಿಸಿದಂತೆ ಚೆದುರಿಹೋದ ವಿಷಯಗಳನ್ನು ಒಂದೆಡೆ ಕಲೆಹಾಕಿ ಅದಕ್ಕೊಂದು ಚಾರಿತ್ರಿಕ ರೂಪವನ್ನು ಕಟ್ಟಿಕೊಡುವ ಪ್ರಯತ್ನ ಮಾಡಿರುವುದು ಕೂಡ ಶೈಕ್ಷಣಿಕ ಮಹಿಳಾ ಅಧ್ಯಯನದ ದೃಷ್ಟಿಯಿಂದ ಗಮನಾರ್ಹ.

ಒಟ್ಟು ಆರು ಅಧ್ಯಾಯಗಳನ್ನೊಳಗೊಂಡಿರುವ ಈ ಕೃತಿಯುದ್ದಕ್ಕೂ ಭಾರತದ ಮಹಿಳಾ ಚಳುವಳಿ ಸಾಗಿಬಂದ ಬಗೆಯನ್ನು ಕಟ್ಟಿಕೊಡುವ ಪ್ರಯತ್ನ ಮಾಡಿದ್ದಾರೆ.

ಸಾಮಾಜಿಕ ಚಳುವಳಿಯ ಹಿನ್ನೆಲೆಯಲ್ಲಿ ಆರಂಭವಾಗುವ ಕೃತಿ ಅದರ ಅಧ್ಯಯನ ಮಾದರಿಯನ್ನು ಕುರಿತು ಚಿಂತಿಸುತ್ತದೆ. ಜೊತೆಗೆ ರೈತ ಚಳುವಳಿ, ಕಾರ್ಮಿಕ ಚಳುವಳಿ, ಪಾನ ನಿಷೇಧ ಮತ್ತು ಇನ್ನಿತರ ಸಾಮಾಜಿಕ ಚಲುವಳಿಗಳ ಜೊತೆಗೆ ಮಹಿಳೆ ತನ್ನನ್ನು ಗುರುತಿಸಿಕೊಂಡ ಬಗೆಯನ್ನು ಈ ಕೃತಿಯಲ್ಲಿ ಪ್ರತ್ಯೇಕವಾಗಿ, ವಿವರವಾಗಿ ವಿಶ್ಲೇಷಿಸಿದ್ದಾರೆ.

ಜಗತ್ತಿನ ಸ್ತ್ರೀವಾದಿ ಸಿದ್ಧಾಂತ ಹಾಗೂ ಹೋರಾಟದ ಹಿನ್ನೆಲೆಯನ್ನು ಗುರುತಿಸುತ್ತಾ 1969 ರಲ್ಲಿ ಅಮೆರಿಕೆಯಲ್ಲಿ ಮೊದಲ ಬಾರಿಗೆ ಮಹಿಳಾ ಅಧ್ಯಯನವೊಂದು ಶೈಕ್ಷಣಿಕ ಶಿಸ್ತಾಗಿ ರೂಪುಗೊಳ್ಳಲು, 'ಜಗತ್ತಿನಾದ್ಯಂತ ಬೇರೂರಿರುವ ಪಿತೃ ಪ್ರಧಾನ ಸಮಾಜ ರಚನೆ, ಅದು ಪಾಲಿಸಿಕೊಂಡು ಬರುತ್ತಿರುವ ಲಿಂಗತಾರತಮ್ಯವೇ ಕಾರಣವೆನ್ನುತ್ತಾರೆ. ಅಲ್ಲಿ ಚಳುವಳಿಯ ಭಾಗವಾಗಿಯೇ ಮಹಿಳಾ ಅಧ್ಯಯನವು ರೂಪುಗೊಂಡಿದ್ದನ್ನು, ಮಹಿಳೆಯರು ಸ್ತ್ರೀವಾದಿ ಚಿಂತನೆ ಹಾಗೂ ಚಳುವಳಿಯಲ್ಲಿ ತಮ್ಮನ್ನು ತೊಡಗಿಸಿಕೊಂಡು ಕ್ರಿಯಾಶೀಲರಾಗಿ ಅದಕ್ಕೊಂದು ಭಿನ್ನ ಆಯಾಮವವನ್ನು ಒದಗಿಸಿದ್ದನ್ನು ಮತ್ತು ಇದರಿಂದಾಗಿಯೇ ಮಹಿಳಾ ಅಧ್ಯಯನವನ್ನು 'ಮಹಿಳಾ ಚಳುವಳಿಯಿಂದ ಹುಟ್ಟಿದ ಕಾರ್ಯಕ್ರಮ ಹಾಗೂ'ಮಹಿಳಾ ಚಳವಳಿಯ ಶೈಕ್ಷಣಿಕ ಆಯುಧ' ಎಂದು ಗುರುತಿಸಿಕೊಂಡ ವಿಚಾರವನ್ನು ಉಷಾ ಗಮನಕ್ಕೆ ತರುತ್ತಾರೆ.

ಭಾರತದಲ್ಲಿ ಇದಕ್ಕಿಂತ ತೀರಾ ಭಿನ್ನವಾಗಿದ್ದು, ಮಹಿಳಾ ಅಧ್ಯಯನವು ಚಳುವಳಿಯ ಬೇಡಿಕೆಗಿಂತ ಹೆಚ್ಚಾಗಿ ಮಹಿಳಾ ದಶಕದ ಕಾರ್ಯಕ್ರಮಗಳ ಭಾಗವಾಗಿ ರೂಪುಗೊಂಡಿದ್ದಾಗಿದೆ, ಎಂಬುದನ್ನು ಎರಡು ಮಾದರಿಗಳ ಮೂಲಕ ಗುರುತಿಸುತ್ತಾರೆ .

1. ಸ್ತ್ರೀವಾದಿ ಚಳುವಳಿಕಾರರಿಂದ ಬರೆಯಲ್ಪಟ್ಟ ಸ್ವಾನುಭವಾಧರಿತ ಪತ್ರಿಕೋದ್ಯಮ ಶೈಲಿ ಬರವಣಿಗೆ

2. ಶೈಕ್ಷಣಿಕ ಶಿಸ್ತಿಗೊಳಪಟ್ಟ ಸಂಶೋಧನಾ ಮಾದರಿಯ ಬರವಣಿಗೆ . ಇದರೊಂದಿಗೆ ಮಹಿಳಾ ಚಳುವಳಿಯ ವಿಶ್ಲೇಷಣೆ ಹಾಗೂ ವರ್ಗೀಕರಣಗಳಲ್ಲಿ ಭಿನ್ನ ನೆಲೆಗಳಿರುವುದನ್ನು ಪರಿಚಯಿಸುತ್ತಾರೆ.

'ಭಾರತದ ಮಹಿಳಾ ಚಳುವಳಿಯು ಆರಂಭಿಕ ದಿನದಿಂದಲೂ ಮಹಿಳಾ ವಿಷಯಗಳನ್ನು ಕುರಿತಂತೆ ಗಮನ ಹರಿಸಿದ್ದು ಮಾತ್ರವಲ್ಲದೆ, ಅದಕ್ಕೆ ಪರಿಹಾರ ಕಾರ್ಯಕ್ರಮಗಳನ್ನು ರೂಪಿಸುತ್ತಾ ಬಂದಿರುವುದು ವಿಶೇಷ. ಆದ್ದರಿಂದಲೇ ಇಲ್ಲಿಯ ಮಹಿಳಾ ಚಳುವಳಿಯ ಪಾತ್ರ, ಪ್ರಭಾವ ಅಪಾರವಾಗಿದೆ' ಎಂಬುದನ್ನು ಗುರುತಿಸುತ್ತಾರೆ.

ಸ್ವಾತಂತ್ರ್ಯೋತ್ತರದ ಮೊದಲ ಎರಡು ದಶಕಗಳಲ್ಲಿ ಸಾಮಾಜಿಕ ಸಮಸ್ಯೆಗಳ ಕೇಂದ್ರಿತ ಮಹಿಳಾ ಹೋರಾಟ ಕಳೆಗುಂದಿದಂತೆ ಕಂಡು ಬಂದರೂ ಅದು ಇನ್ನೊಂದು ಬಗೆಯಲ್ಲಿ ಎಡ ಪಂಥೀಯ ಹೋರಾಟಗಳಲ್ಲಿ ಜೀವಂತವಾಗಿದ್ದುದನ್ನು ಲೇಖಕಿ ಗಮನಿಸುತ್ತಾರೆ.

ಅಂತರಾಷ್ಟ್ರೀ ಮಹಿಳಾ ವರ್ಷದ ನಂತರ ಮಹಿಳಾ ಚಳುವಳಿಯ ಧ್ಯೇಯ ಧೋರಣೆಗಳು ಸ್ಪಷ್ಟಗೊಂಡು ಎಲ್ಲ ಕ್ಷೇತ್ರಗಳಲ್ಲೂ ತನ್ನ ಕಾರ್ಯ ವ್ಯಾಪ್ತಿಯನ್ನು ವಿಸ್ತರಿಸಿದ ಬಗೆಯನ್ನು ಉದಾಹರಣೆಗಳ ಸಮೇತ ವಿವರಿಸುತ್ತಾರೆ. ಜಾಗತೀಕರಣವನ್ನು ಎದುರಿಸುವ ದಿಕ್ಕಿನಲ್ಲೂ ತನ್ನದೇ ಹಾದಿಗಳನ್ನು ರಾಜಮಾರ್ಗಗಳಾಗಿ ಪರಿವರ್ತಿಸಿಕೊಳ್ಳುವ ಶ್ರಮ ಮಹಿಳಾ ಚಳುವಳಿಗಿದೆ ಎಂಬುದನ್ನು ಉಷಾ ಗುರುತಿಸುತ್ತಾರೆ.

ಸತೀ ಪದ್ಧತಿ, ಬಾಲ್ಯವಿವಾಹ, ವಿಧವಾ ವಿವಾಹಗಳ ಜೊತೆಗೆ ಇಂದಿಗೂ ಕಾಡುತ್ತಿರುವ ಪ್ರಮುಖ ಮಹಿಳಾ ವಿಷಯಗಳಾದ ಸ್ತ್ರೀ ಶಿಕ್ಷಣ, ಕೌಟುಂಬಿಕ ಹಿಂಸೆ, ಲಿಂಗತಾರತಮ್ಯ ಧೋರಣೆ, ಆಸ್ತಿ ಹಕ್ಕಿನ ನಿರಾಕರಣೆ, ಹೆಣ್ಣು ಭ್ರೂಣ ಹತ್ಯೆ, ಸಮೂಹ ಮಾಧ್ಯಮಗಳಲ್ಲಿ ಮಹಿಳೆಯ ಅಶ್ಲೀಲ ಚಿತ್ರಣ, ವರದಕ್ಷಿಣೆ ಪಿಡುಗು ಇತ್ಯಾದಿಗಳನ್ನು ಮತ್ತು ಇವುಗಳಿಗೆ ಸಂಬಂಧಿಸಿದಂತೆ ಜಾರಿಯಾದ ಕಾನೂನು ಕಟ್ಟಳೆಗಳನ್ನು ಕುರಿತು ದೀರ್ಘವಾಗಿಯೇ - 2 ಅಧ್ಯಾಯಗಳಲ್ಲಿ ಚರ್ಚಿಸಿದ್ದಾರೆ.

ಒಟ್ಟಾರೆ ಭಾರತದ ಮಹಿಳಾ ಚಳುವಳಿಯನ್ನು ಚಾರಿತ್ರಿಕವಾಗಿ ಸಮೀಕ್ಷಿಸಿದರೆ ಅದು ಎಲ್ಲ ಘಟ್ಟಗಳಲ್ಲೂ ಕೆಲವೊಂದು ಮಹಿಳಾ ವಿಷಯಗಳನ್ನು ಕೇಂದ್ರವಾಗಿಟ್ಟುಕೊಂಡು ರೂಪಿತವಾದ ಚಳುವಳಿಯಾಗಿದೆ. ಇದು ಪಶ್ಚಿಮ ಮುಖಿಯಾದದ್ದಲ್ಲ ಎಂಬುದನ್ನು ಕೃತಿಯುದ್ದಕ್ಕೂ ಕೆಲವೊಮ್ಮೆ ಉದಾಹರಣೆಯ ಸಮೇತ ಸಮರ್ಥಿಸಿದ್ದಾರೆ.

ಮಹಿಳಾ ಚಳುವಳಿ ಕುರಿತ ಕೆಲವು ಸಮಕಾಲೀನ ಸೈದ್ಧಾಂತಿಕ ವಿಷಯಗಳನ್ನು ಚರ್ಚಿಸುತ್ತ, ಒಟ್ಟಾರೆ ಸ್ತ್ರೀವಾದ ನಮ್ಮಲ್ಲಿ ಒಂದು ವಿಚಾರವಾಗಿ ಗಟ್ಟಿಗೊಂಡಿತೇ ಹೊರತು ಚಳುವಳಿಯಾಗಿ ಗಟ್ಟಿಗೊಳ್ಳಲಿಲ್ಲ ; ಆದ್ದರಿಂದಲೇ ಇದು ಶಿಕ್ಷಣ ಕ್ಷೇತ್ರದಿಂದ ದೂರವೇ ನಿಂತು ಬಿಟ್ಟಿತೇನೋ ಎಂಬ ಅನುಮಾನದ ಆತಂಕವನ್ನು ವ್ಯಕ್ತಪಡಿಸುತ್ತಾರೆ.

ಇಡೀ ಕೃತಿಯಲ್ಲಿ ಒಟ್ಟಾರೆ ಭಾರತದ ಮಹಿಳಾ ಚಳುವಳಿ ನಡೆದು ಬಂದ ದಾರಿಯನ್ನು, ಅದು ಕಂಡ ಬದಲಾವಣೆಗಳ ಪರಿಯನ್ನು ಉಷಾ ಗಂಭೀರವಾಗಿಯೇ ಗುರುತಿಸಿದ್ದಾರೆ. ಮಾಹಿತಿ ಪ್ರಧಾನವಾದ ಕೃತಿ ಇದಾದರೂ ಭಾರತದ ಮಹಿಳಾ ಚಳುವಳಿ ಇದುವರೆಗೂ ಕಂಡಿರುವ ಅನೇಕ ಬದಲಾವಣೆಗಳು ನಿಜವಾಗಿಯೂ ತಾನು ಬಯಸಿಸಿದಷ್ಟು ಆಗಿದೆಯೇ ? ತನ್ನ ಗುರಿಯನ್ನು ತಲುಪಿದೆಯೇ ? ಎಂಬ ಪ್ರಶ್ನೆಗಳೊಂದಿಗೆ ಅದರೆಲ್ಲ ಜವಾಬ್ದಾರಿ ಇಲ್ಲಿನ ಸಮಸ್ಯೆಗಳಿರುವವರೆಗೂ ಇದ್ದದ್ದೇ ಎಂಬುದನ್ನೂ ಸೂಚಿಸುತ್ತಿರುವಂತಿದೆ. ಇದರೊಂದಿಗೇ ಮುಂದಿನ ಅಧ್ಯಯನದ ದಿಕ್ಕಿಗೂ ಈ ಕೃತಿ ದಾರಿ ತೋರಿಸುತ್ತದೆ.

**ಗೀತಾ ಡಿ.ಸಿ**
ಬೃಂದಾವನ್ ಕಾಲೇಜು, ಭೂಪಸಂದ್ರ,
ಹೆಬ್ಬಾಳ - ಅಂಚೆ, ಬೆಂಗಳೂರು - 94

# " ಬಹು ಪತ್ನಿತ್ವ ಸರಿಯೇ "

**ಎಸ್. ಶೈಲಜಾ ಹಾಸನ್**

"ಒಂದು ಹೆಣ್ಣಿಗೆ ಒಂದೇ ಗಂಡು, ಒಂದು ಗಂಡಿಗೇ ಒಂದೇ ಹೆಣ್ಣು" ಎನ್ನುವ ಮಾತುಗಳು ಕೇಳಿಬರುತ್ತಿರುವ ಇಂದಿನ ದಿನಗಳಲ್ಲೂ ಒಂದು ಗಂಡು ಒಂದು ಹೆಣ್ಣಿಗಿಂತ ಹೆಚ್ಚು ಹೆಂಡತಿಯರನ್ನು ಹೊಂದಿರುವುದು ಇಂದು ಸರ್ವೆ ಸಾಮಾನ್ಯ ಸಂಗತಿ ಎನ್ನುವಂತಾಗಿದೆ.

ತಾರುಣ್ಯದಲ್ಲಿಯೇ ಪತಿಯನ್ನು ಕಳೆದುಕೊಂಡ ಹೆಣ್ಣು ಏಕಾಂಗಿಯಾಗಿ ಇಡೀ ಜೀವನ ಕಳೆಯಬೇಕು ಎಂದು ಒತ್ತಡ ಹೇರುವ ಸಮಾಜ, ಅದೇ ಗಂಡು ಪತ್ನಿ ಬದುಕಿರುವಾಗಲೇ ಇನ್ನೊಂದು ಹೆಣ್ಣನ್ನು ಮದುವೆಯಾಗಲು ಸಮ್ಮತಿ ನೀಡುವುದು, ಆ ವಿವಾಹಕ್ಕೆ ಮಾನ್ಯತೆ ಕೊಡುವುದು ಸಮಾಜದ ವಿಪರ್ಯಾಸವಲ್ಲವೇ ? ಮೊದಲ ಹೆಂಡತಿಯಲ್ಲಿ ಯಾವುದೇ ಲೋಪವಿಲ್ಲದಾಗ್ಯೂ, ಗಂಡ ನೆನೆಸಿದವನು ಮತ್ತೊಂದು ಮದುವೆಯಾಗಿಲು ಅರ್ಹನು. ಅಥವಾ ಸಣ್ಣ ಪುಟ್ಟ ಕಾರಣಗಳೇ ಸಾಕು ಆತ ಮತ್ತೊಮ್ಮೆ ಹಸೆಏರಲು, ಹೆಂಡತಿ ಗಯ್ಯಾಳಿ ಎಂದೂ, ವರದಕ್ಷಿಣೆ ತಾರದವಳೆಂದೋ, ಬರೀ ಹೆಣ್ಣು ಮಕ್ಕಳನ್ನ ಹೆಡೆಯುತ್ತಾಳೆಂದೋ ಹೀಗೆ ನೆಪಗಳು ಸಾಕು ಅವನಿಗೆ. ಬಹಳ ಹಿಂದಿನಿಂದಲೂ ಬಂದಿರುವ ಈ ಬಹು ಪತ್ನಿತ್ವದ ಬಿಸಿ ಅದನ್ನು ಅನುಭವಿಸುತ್ತಿರುವ ಹೆಣ್ಣುಗಳೇ ಬಲ್ಲರು. ಎಲ್ಲವನ್ನು ಹಂಚಿಕೊಳ್ಳಬೇಕಾಗಿರುವ ಅದರಲ್ಲೂ ದಾಂಪತ್ಯವನ್ನು

ಹಂಚಿಕೊಂಡು ಇಡೀ ಬದುಕಿನಲ್ಲಿ ಬಾಳುವುದು ಅದೆಷ್ಟು ಅಸಹನೀಯ.

ಬಹು ಹಿಂದೆ ರಾಜಾಧಿರಾಜರುಗಳು, ತಮ್ಮ ಪೌರುಷದ ಸಂಕೇತವಾಗಿ ಮಡದಿಯರ ಸಂಖ್ಯೆಯನ್ನು ಹೆಚ್ಚಿಸುತ್ತಿದ್ದರಂತೆ. ಆ ಮಹಾರಾಜನ ಕೈ ಹಿಡಿದ ನತದೃಷ್ಟೆ, ತನ್ನ ಯೌವ್ವನದ ದಿನಗಳನ್ನೆಲ್ಲ ಆತನ ಒಲುವಿಕೆಗಾಗಿಯೋ ಕಾದು ಕಾದು ಮುಪ್ಪಾದ ಸಂಗತಿಗಳು ಇಂದಿಗೂ ನಮ್ಮ ಮನ ಕಲಕುತ್ತದೆ.

ಇಂತಹ ಪದ್ಧತಿಗಳನ್ನು ಇನ್ನಾದರೂ ಕೈಬಿಡಬಾರದೇ. ಇದರಲ್ಲಿ ಗಂಡಿನ ಪಾತ್ರವೇ ಮಾತ್ರವಲ್ಲ, ಎರಡನೆ ಪತ್ನಿಯಾಗಲೊಪ್ಪುವ, ಆ ಹೆಣ್ಣಿನ ಪಾತ್ರವೂ ದೊಡ್ಡದೇ.

"ಕೊಡಲಿಯ ಕಾವು ಕುಲಕ್ಕೆ ಮೃತ್ಯು" ಎಂಬಂತೆ, ಹೆಣ್ಣಿಗೆ ಹೆಣ್ಣೆ ಶತ್ರುವಾಗುವ ಇಂತಹ ಪ್ರಸಂಗಗಳು ತಪ್ಪಬೇಕು. ಪತ್ನಿ ಬದುಕಿರುವಾಗಲೇ ಆತನ ಕೈ ಹಿಡಿಯಲು ಮುಂದಾಗುವ ಹೆಣ್ಣುಗಳು ಅದನ್ನು ವಿರೋಧಿಸಬೇಕು. ಗಂಡು ಸಿಕ್ಕರೆ ಸಾಕು ಎಂಬ ಧಾವಂತದಲ್ಲಿ ಎಷ್ಟನೆ ಮದುವೆಯಾದರೂ ಸರಿ, ತಮ್ಮ ಮಗಳಿಗೆ ಮದುವೆಯಾದರೆ ಸಾಕು ಎನ್ನುವ ಮನೋಭಾವನೆ ಹೆಣ್ಣು ಹೆತ್ತವರಿಂದ ದೂರಾಗಬೇಕು. ಇಂತಹ ವಿಚಾರಧಾರೆಗಳನ್ನು ಬೆಳೆಸಿಕೊಳ್ಳುವಂತಹ ನಿಟ್ಟಿನಲ್ಲಿ ಸಮಾಜ ಬದಲಾಗಬೇಕು.

ಎರಡನೇ ವಿವಾಹ ಹೇಗೆ ಕಾನೂನು ಬಾಹಿರವೋ ಹಾಗೆ ಸಮಾಜಬಾಹಿರವೂ ಆಗಿ ಅಂತಹ ಗಂಡಸರನ್ನು ಸಮಾಜವೇ ಭಹಿಷ್ಕರಿಸಿದಾಗ ಬಹು ಪತ್ನಿತ್ವ ಬಯಸುವ ಗಂಡುಗಳು ಎಚ್ಚತ್ತಾರು, ಹೆಣ್ಣು ಹೆತ್ತವರು ಎಚ್ಚೆತ್ತಾರು.

ಹಳ್ಳಿಗಳಲ್ಲಿ ಅಷ್ಟೆಯೇ ಇಂತಹ ಸಂದರ್ಭಗಳು ಎದುರಾಗುತ್ತಿಲ್ಲ. ಪಟ್ಟಣಗಳಲ್ಲಿಯೂ, ನಾಗರೀಕತೆಯ ಉತ್ತುಂಗ ಶಿಖರದಲ್ಲಿರುವ ಜನಾಂಗದಲ್ಲಿಯೂ ಇದು ಕಂಡು ಬರುತ್ತಿದೆ.

ಒಂದೇ ಉದ್ಯೋಗ ಮಾಡುವ ಹೆಣ್ಣು, ಗಂಡು ಆಕರ್ಷಣೆಗೆ ಒಳಗಾಗಿ, ಪ್ರೀತಿ ಪ್ರೇಮ ಎಂಬ ಮರಳು ಸರಪಣಿಹಿಡಿದು, ವಿವಾಹಿತವಾದರೂ ಅಂಜದೆ ಆತನ ದ್ವಿತೀಯ ಪತ್ನಿಯಾಗಲು ಸಿದ್ಧಳಾಗುವ ಹುಚ್ಚಿಗೆ ಏನನ್ನ ಬೇಕು.?

ಕಾನೂನಿನಲ್ಲಿ ಆತನ ಆಸ್ತಿಗಾಗಲಿ, ಉದ್ಯೋಗಕ್ಕಾಗಲಿ ಯಾವುದೇ ಹಕ್ಕನ್ನು ಪಡೆಯದ ದ್ವಿತೀಯ ಪತ್ನಿಯ ಮಕ್ಕಳ ಸಂಕಟ ಅನುಭವಿಸಿದವರಿಗೇ ಗೊತ್ತು.

ಯಾಕಿಂಥ ಮೌಢ್ಯ ಜನತೆಗೆ, ಕೊಟ್ಟಿಗೆಯಲ್ಲಿ ಕಟ್ಟುವ ಪ್ರಾಣಿಗಳಂತೆ, ವ್ಯಕ್ತಿತ್ವ ಇರುವ ಹೆಣ್ಣುಗಳನ್ನು ತಂದು ಪತ್ನಿಯರನ್ನಾಗಿಸುವುದು ಸರಿಯೇ. ಈ ನಿಟ್ಟಿನಲ್ಲಿ ಮೊದಲು ಹೆಣ್ಣೆ ಎಚ್ಚೆತ್ತುಕೊಳ್ಳ ಬೇಕು. ಯಾವುದೋ ಆಮಿಶಕ್ಕೆ ಒಳಗಾಗಿ, ಭ್ರಮೆಗೆ ಒಳಗಾಗಿ, ಮುಂದಿನ ಬದುಕನ್ನು ಹಾಳುಮಾಡಿ ಕೊಳ್ಳುವುದಕ್ಕಿಂತ ಮನಸ್ಸಿನ ಸ್ಥಿಮಿತತೆ ಸಾಧಿಸಿ ದೃಢ ಮನಸ್ಕರಾಗಿ ಇಂದೇ ಬಹು ಪತ್ನಿತ್ವದ ವಿರೋಧ ವ್ಯಕ್ತ ಪಡಿಸಿ, ಆದರೆ ವಿರುದ್ಧ ಸಡ್ಡು ಹೊಡೆದು ನಿಂತರೆ, ಹೆಣ್ಣು ಹೆತ್ತವರೂ ಕೂಡ ತಮ್ಮ ಮಕ್ಕಳಿಗೆ ಮದುವೆ ಇಲ್ಲದಿದ್ದರೂ ಚಿಂತೆ ಇಲ್ಲಾ ಎರಡನೆ ವರವಿಗೆ ಕೊಡಲಾರೆ ಎಂದು ಶಪಥಗೈಯಬೇಕು. ಆಗ ಇದನ್ನು ನಿಲ್ಲಿಸಲು ಸಾಧ್ಯ.

ಈ ನಿಟ್ಟಿನಲ್ಲಿ ಮೊದಲ ಪತ್ನಿಯ ಪಾತ್ರವೂ ಮುಖ್ಯವಾಗಿದೆ. ಎರಡನೆ ಮದುವೆಗೆ ಆಕೆ ಎಂದೂ ಆಸ್ಪದ ಕೊಡಬಾರದು. ಹಾಗೂ ಆತ ಮೀರಿ ನಡೆಯುವಂತಾದರೆ ಧೈರ್ಯವಾಗಿ ಕಾನೂನಿನ ಮೊರೆ ಹೋಗ ಬೇಕು. ಒಮ್ಮೆ ಒಬ್ಬಬ್ಬರಿಗೆ ಸೆರೆಮನೆವಾಸವಾದರೆ ಉಳಿದ ಅಂತಹ ಗಂಡುಗಳೂ ಬುದ್ದಿ ಕಲಿತಾರು.

**ಎನ್. ಶೈಲಜಾ ಹಾಸನ**
ಭೂಮಿಕಾ ನಿಲಯ,ಶಿವಜ್ಯೋತಿ ನಗರ,
ಹಾಸನ - 573201

# ದಾಳದ ಆಟ

ಯಾರದೋ ಆಟಕೆ ದಾಳ
ಪಾಪ ಈ ಹಕ್ಕಿ
ಅರಿತರೂ ಅರಿಯದ
ಗುಬ್ಬಿ ಕಕ್ಕಾ ಬಿಕ್ಕಿ

ಎಲ್ಲಿಯ ಗುಬ್ಬಿ
ಎಲ್ಲಿಯ ಅಭಿಜ್ಞಾ
ಎಲ್ಲವೂ ತಾಯಿಯ ಲೀಲೆ
ಬಿಟ್ಟರೂ ಬಿಡದೆನ್ನದ ಮಾಯೇ

ಯಾರದೋ ದೂರು
ಯಾರಿಗೋ ಸುಮ್ಮಾನ
ಬೆಟ್ಟಕೆ ಏರಿಸಿ
ತಳ್ಳುವ ಛಾತಿ
ಭಲೆ ಭಲೆ ಗುಬ್ಬಿಯ
ಮೇಲೆ ಬ್ರಹ್ಮಾಸ್ತ್ರ

ಆಟದ ಪಾಠ
ಓದದ ಹಕ್ಕಿಗೆ
ಬೆನ್ನಿಗೆ ಇರಿವ
ಕೈಗಳ ಸುಳಿವು

ದಾಳದ ಆಟಕೆ
ಪಳಗದ ಗುಬ್ಬಿ
ಮಾಗುವ ಹೊತ್ತಿಗೆ
ಆಟವೇ ಮುಗಿದಿತ್ತು
ಯಾರದೋ ಮಡಿಲಿಗೆ
ಜಯದಗರಿಯು

ದಾಳದ ಪಾತ್ರವ
ಮುಗಿಸಿದ ಹಕ್ಕಿ
ಮೆಲ್ಲಗೆ ನಕ್ಕು
ಛಂಗನೆ ಹಾರಿತು
ರೆಕ್ಕೆಯ ಬಿಚ್ಚಿ
ನಭೋ ಮಂಡಲಕೆ

**ಎಸ್.ಶೈಲಜಾ ಹಾಸನ್**
**ಭೂಮಿಕಾ**
**ಶಿವಜ್ಯೋತಿ ನಗರ, ಹಾಸನ**

# ವರ್ತುಲ

ಸಶಬ್ದ ಬಿಕ್ಕಳಿಕೆಗಳ ಆ ಸಂಜೆ
ನಾನು ಅಂದಿದ್ದೇನೋ
ಈತ ಮೆತ್ತಗೆ ನೆತ್ತಿ ನೇವರಿಸಿ ಅಂದ
'ನಾಳೆ ಮುಂಜಾನೆಯಿಂದ ಸಂಜೆ
ಮಕ್ಕಳ ಹೊಣೆ ನನಗಿರಲಿ'
ಒಂದು ಬಿಸಿಮುತ್ತು, ಬೆಚ್ಚಗಿನ ಹಿಡಿ
ಗಟ್ಟಿ ಭರವಸೆಯಲ್ಲಿ ಆ ಬೆಳಗು

ಮುಂಜಾನೆ,
ಕದವಿಕ್ಕಿದ ಮನೆಯಲ್ಲಿ ಏಕಾಕಿ
ಮನಸು ಹೊರ ಹೋದ ಮಕ್ಕಳ
ಬೆನ್ನಲೆ ಅಲೆಯುತ್ತಿದೆ - ಹಸಿದ ನಾಯಿ
ಎಲ್ಲ ಲಗುಬಗೆ ಮುಗಿಸಿ
ಕೂಡಬೇಕು ನಿಶ್ಚಿಂತ
ಮಳೆಗಾಲದ ಮಧ್ಯಾಹ್ನ
ಗಂಜಿಯುಂಡು ಕುಮಾರವ್ಯಾಸ ಓದಿದ ದಿನಗಳಂತೆ
ಅಂದುಕೊಂಡಿದ್ದೇ ಬಂತು

ಡಬ್ಬಿ ಸಂದಿಯಲಿ ಒಂದು ಹಲ್ಲಿ
ಬಾಲ ಬಡಿಯಿತು
ಧೂಳೊರೆಸುತ್ತ ಒಂದೊಂದೇ ಕೋಣೆ
ಸರಿಪಡಿಸಿ.....
ಮುಸ್ಸಂಜೆ ಮಕ್ಕಳ ದನಿಗೆ ಗಡಬಡಿಸಿದೆ.
ನಗುವ ಮಕ್ಕಳ ಹಿಂದೆ ಸುಸ್ತಾದ ಈತ
ನಗೆಯ ಬೆಳಕನ್ನೆಲ್ಲೂ ಬಚ್ಚಿಡದಂತೆ ನಕ್ಕ
ನಾ ಕೃತಜ್ಞೆ!

ಕಣ್ಣಂಚಿನದೊಂದು ಪುಟ್ಟ ಹನಿ ನುಂಗಿ
ಉಪ್ಪು ದನಿಗೊಂದಿಷ್ಟು ನೀರು ಕುಡಿದು ಸರಾಗವಾದೆ
ನಡುರಾತ್ರಿ ಯಾವದೋ ಜಾವದಲಿ
ಬಡಿವ ಬಾವಲಿ ಮನಸು
ಬೆಳಕಿನ ಸತ್ಯಕ್ಕೆ ನೇತುಕೊಂಡಂತೆ
ಮತ್ತೆ ವರ್ತುಲ ಸಿದ್ಧ!

ನಿದ್ದೆಯಲ್ಲಿದ್ದವನ ಎದೆ ಮೇಲೆ
ಕಣ್ಣೀರಿನಿಂದ ಬರೆದೆ
'ಕೇಂದ್ರಬಿಂದುವಿಗೆಂದೂ ಚಲನೆಯಿಲ್ಲ ದೊರೆ'

**ಡಾ.ವಿನಯಾ**

ಮಾನಸ ಪತ್ರಿಕೆ ಯಾವ ಸಂಸ್ಥೆಯ, ಸರ್ಕಾರದ ನೆರವಿಲ್ಲದೇ ಪ್ರಕಟವಾಗುತ್ತಿರುವ ಮಹಿಳೆಯರೇ ನಡೆಸುತ್ತಿರುವ ಸ್ವಾಯತ್ತ ಪತ್ರಿಕೆ. ಓದುಗರು ಹಾಗೂ ಸಹೃದಯರು ನೀಡುವ ಆರ್ಥಿಕ ನೆರವೇ ಪತ್ರಿಕೆಯ ಜೀವಾಳ. ಚಂದಾದಾರರಿಗೆ ಚಂದಾ ಅವಧಿ ಮುಕ್ತಾಯವಾದುದರ ಬಗ್ಗೆ ಸೂಚನೆಯನ್ನು ನೀಡಲಾಗುತ್ತದೆ. ಓದುಗರು ತಕ್ಷಣ ಚಂದಾ ನವೀಕರಿಸಬೇಕೆಂದು ಕೋರುತ್ತೇವೆ. ಪತ್ರಿಕೆಯು ಉಳಿದು ಬೆಳೆಯಬೇಕಾದರೆ ಓದುಗರ ಸಹಕಾರ ಅತ್ಯಗತ್ಯ.

**ವಾರ್ಷಿಕ ಚಂದಾ : 100 ರೂ**

**ಸಂಸ್ಥೆಗಳಿಗೆ : 150 ರೂ**

**ಸಂ.ಮಂಡಳಿ**

REGD No. : CPMG/KA/BGE/289/2003 - 05

BOOK-POST
PRINTED MATTER

ವಿಳಾಸ :

**ಮಾನಸ**

ಪಂಚಾಯಿತಿ ರಸ್ತೆ, ಕಾಡುಗೋಡಿ

ಬೆಂಗಳೂರು - 560 067